ಎನ್. ಪ್ರಭುಸ್ವಾಮಿ

# ಭಾರತಕ್ಕೆ ಅಮೆರಿಕದ ಆರ್ಥಿಕ ನೆರವು



ಪ್ರಚಾರ ಪುಸ್ತಕಮಾಲೆ–೧೭೪

ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
೧೯೭೧

ಪ್ರಚಾರ ಪುಸ್ತಕಮಾಲೆ ೧೭೯

# ಭಾರತಕ್ಕೆ ಅಮೆರಿಕದ ಆರ್ಥಿಕ ನೆರವು
# ಮತ್ತು
# ಅದರ ಪರಿಣಾಮಗಳು

ಎನ್. ಪ್ರಭುಸ್ವಾಮಿ




ಪ್ರ ಸಾ ರಾ ಂ ಗ
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.
೧೯೭೧

ಮೊದಲ ಮುದ್ರಣ : ೧೯೭೧
೫೦೦೦ ಪ್ರತಿಗಳು

ಬೆಲೆ :

ಸಾದಾ ಪ್ರತಿ ೨೫ ಪೈ. ಉತ್ತಮ ಪ್ರತಿ ೩೭ ಪೈ.

ಪ್ರಕಾಶಕರು :
ಡೈ ರೆ ಕ್ಟ ರ್
ಪ್ರಸಾರಾಂಗ
ಮಾನಸಗಂಗೋತ್ರಿ, ಮೈಸೂರು-೬.

ಮುದ್ರಕರು :
ಶ್ರೀ ರಘುವೀರ್ ಮುದ್ರಣಾಲಯ, ಮೈಸೂರು-೪.

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ, ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ, ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆಮೂಲೆಗೂ ಪ್ರಸರಿಸಿ, ಉಚ್ಚ ಶಿಕ್ಷಣವನ್ನು ಪಡೆಯಲು ಅವಕಾಶಹೊಂದದ ಸಾಮಾನ್ಯ ಜನರ ಹೃದಯವನ್ನೂ ಬೆಳಗಿಸಿ ಸಮಷ್ಟಿ ಪ್ರಜೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ, ಸುಲಭಗ್ರಾಹ್ಯವೂ ಆದ ಕನ್ನಡ

ಭಾಷೆಯ ಮೂಲಕ ತಿಳುವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದುಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ ತಾವೂ ಆನಂದವನ್ನು ಅನುಭವಿಸುತ್ತಾ ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ. ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ. ನಮ್ಮ ಸಮಾಜದಲ್ಲಿ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲ ಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ

ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೇ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ ಸಾಹಿತ್ಯ ಮತ್ತು ಕಲೆ ಮುಂತಾದ ವಿಷಯಗಳನ್ನು ಕುರಿತು ನೂರ ಎಪ್ಪತ್ತೆಂಟು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗಿದೆ.

ಈ ಮಾಲೆಯಲ್ಲಿ ಈಗ ಹೊರಬಿದ್ದಿರುವ ಶ್ರೀ ಎನ್. ಪ್ರಭುಸ್ವಾಮಿ ಅವರ "ಭಾರತಕ್ಕೆ ಅಮೆರಿಕದ ಆರ್ಥಿಕ ನೆರವು ಮತ್ತು ಅದರ ಪರಿಣಾಮಗಳು" ಹೆಚ್ಚು ಜನಪ್ರಿಯವಾಗಲೆಂದು ಆಶಿಸುತ್ತೇನೆ.

ಮೈಸೂರು

**ದೇ. ಜವರೇಗೌಡ**
ಉಪಕುಲಪತಿ

# ಅರಿಕೆ

ಭಾರತವು ಸ್ವಾತಂತ್ರ್ಯವನ್ನು ಪಡೆದಮೇಲೆ ತನ್ನ ಆರ್ಥಿಕಾಭಿವೃದ್ಧಿಯನ್ನು ಸಾಧಿಸಲು ಆರ್ಥಿಕ ಯೋಜನೆಗಳನ್ನು ಸಿದ್ಧಗೊಳಿಸಿದೆ. ಆದರೆ ಆರ್ಥಿಕ ಯೋಜನೆಯ ಎಲ್ಲಾ ಅಂಶಗಳನ್ನು ತನ್ನ ಸ್ವಶಕ್ತಿಯಿಂದಲೇ ನಿರ್ವಹಿಸಲು ಭಾರತಕ್ಕೆ ಸಾಧ್ಯವಾಗುತ್ತಿಲ್ಲ. ಆದುದರಿಂದ ಭಾರತ, ಪ್ರಪಂಚದ ಅನೇಕ ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳಿಂದ ತಾಂತ್ರಿಕಸಹಾಯ ಮತ್ತು ಧನಸಹಾಯ ಪಡೆಯುತ್ತಿದೆ. ನೆರವು ನೀಡುತ್ತಿರುವ ರಾಷ್ಟ್ರಗಳ ಪೈಕಿ, ಅಮೆರಿಕಾದ ಸಂಯುಕ್ತ ಸಂಸ್ಥಾನಗಳು ಭಾರತಕ್ಕೆ ಗಮನಾರ್ಹವಾದ ಪ್ರಮಾಣದಲ್ಲಿ ನೆರವು ನೀಡುತ್ತಿವೆ. ಈ ಪುಟ್ಟ ಪುಸ್ತಕದಲ್ಲಿ 1950–1970ರ ಅವಧಿಯಲ್ಲಿ ಎಷ್ಟರಮಟ್ಟಿಗೆ ಭಾರತಕ್ಕೆ ಅಮೆರಿಕಾದ ನೆರವು ದೊರೆತಿದೆ ಮತ್ತು ಅದರ ಪರಿಣಾಮಗಳೇನು ಎಂಬುದನ್ನು ಕುರಿತು ಚರ್ಚಿಸಲಾಗಿದೆ. ಇದೊಂದು ಪುಸ್ತಕವಾಗಲು ಸರ್ವವಿಧಗಳಲ್ಲೂ ಕಾರಣರಾದ ನನ್ನ ಸಹೋದ್ಯೋಗಿಗಳಿಗೆ ನಾನು ಚಿರಋಣಿ. ಅರ್ಥಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಡಾ. ಜಿ. ಟಿ. ಹುಚ್ಚಪ್ಪನವರು ಮತ್ತು ಮಹಾರಾಜಾ ಕಾಲೇಜಿನಲ್ಲಿ ರೀಡರ್ ಆಗಿರುವ ಶ್ರೀ ಚನ್ನಬಸಪ್ಪನವರು ನನಗೆ ಎಲ್ಲಾ ವಿಧದಲ್ಲೂ ಪ್ರೋತ್ಸಾಹ ನೀಡುತ್ತಿರುವುದಕ್ಕೆ ಅವರಿಗೆ ನನ್ನ ಕೃತಜ್ಞತೆಗಳು. ನನ್ನ ಗುರುಗಳಾದ ಶ್ರೀ ಎ. ಪಿ. ಶ್ರೀನಿವಾಸಮೂರ್ತಿಯವರು ಮತ್ತು ನನ್ನ ಸಹೋದ್ಯೋಗಿಗಳಾದ

ಡಾ|| ಮಾದಯ್ಯನವರು ಹಸ್ತಪ್ರತಿಯನ್ನು ಪರಿಶೀಲಿಸಿ ಸೂಕ್ತ ಸಲಹೆಗಳನ್ನು ಕೊಟ್ಟಿದ್ದಕ್ಕಾಗಿ ಅವರಿಗೆ ನನ್ನ ಹೃತ್ಪೂರ್ವಕ ವಂದನೆಗಳು. ಈ ಪುಸ್ತಕದ ಪ್ರಕಟಣೆಗೆ ಕಾರಣರಾದ ನನ್ನ ಸಹೋದ್ಯೋಗಿ ಶ್ರೀ ರೇಣುಕರವರಿಗೆ ನನ್ನ ವಂದನೆಗಳು. ಪ್ರಸಾರಾಂಗದ ಮೂಲಕ ಈ ಪುಸ್ತಕ ವನ್ನು ಪ್ರಕಟಿಸಲು ಏರ್ಪಾಡು ಮಾಡಿದ ಡಾ. ಪ್ರಭು ಶಂಕರರವರಿಗೂ ಮತ್ತು ಶ್ರೀ ಅನಂತರಾಮಯ್ಯನವರಿಗೂ ನನ್ನ ನಮಸ್ಕಾರಗಳು.

ಪುಸ್ತಕರೂಪದಲ್ಲಿ ಪ್ರಕಟಿಸುವುದಕ್ಕೆ ಮೊದಲು ಈ ವಿಷಯವನ್ನು ಕುರಿತು ಭಾಷಣ ಮಾಡಲು ಅವಕಾಶ ಮಾಡಿಕೊಟ್ಟ ಮೂಡಬಿದ್ರೆಯ ಮಹಾವೀರ ಕಾಲೇಜಿನ ಪ್ರಿನ್ಸಿಪಾಲರಿಗೂ ಮತ್ತು ಬೀರೂರಿನ ಶ್ರೀ ಜವಹರ್ ಲಾಲ್‌ನೆಹರೂ ಕಾಲೇಜಿನ ಪ್ರಿನ್ಸಿಪಾಲರಿಗೂ ನನ್ನ ವಂದನೆಗಳು.

ಮಹಾರಾಜಾ ಕಾಲೇಜು
ಮೈಸೂರು.

ಎನ್. ಪ್ರಭುಸ್ವಾಮಿ

# ಭಾರತಕ್ಕೆ ಅಮೆರಿಕದ ಆರ್ಥಿಕ ನೆರವು ಮತ್ತು ಅದರ ಪರಿಣಾಮಗಳು

## ೧. ವಿದೇಶಿ ನೆರವಿನ ಹಿನ್ನೆಲೆ

ಅಂತರರಾಷ್ಟ್ರೀಯ ರಾಜಕೀಯ ಚಟುವಟಿಕೆಗಳಲ್ಲಿ ಒಂದು ರಾಷ್ಟ್ರವು ಮತ್ತೊಂದು ರಾಷ್ಟ್ರಕ್ಕೆ ಆರ್ಥಿಕ ಸಹಾಯ ಒದಗಿಸಿಕೊಡುವುದು ಈಗ ಸಾಮಾನ್ಯವಾಗಿದೆ. ಈ ರೀತಿ ಆರ್ಥಿಕ ನೆರವನ್ನು ಒದಗಿಸುವಾಗ ರಾಷ್ಟ್ರಗಳು ಅನೇಕ ರಾಜಕೀಯ ಉದ್ದೇಶಗಳನ್ನು ಅಥವಾ ಆರ್ಥಿಕ ಉದ್ದೇಶಗಳನ್ನು ಇಟ್ಟುಕೊಂಡಿರುತ್ತವೆ. ಇದರಿಂದ ಆಗಿಂದಾಗ್ಗೆ ರಾಷ್ಟ್ರಗಳ ಮಧ್ಯೆ ಮನಸ್ತಾಪಕ್ಕೆ ಕಾರಣ ವಾಗಿದೆ. ಆದರೂ ಶ್ರೀಮಂತರಾಷ್ಟ್ರಗಳು ಬಡರಾಷ್ಟ್ರ ಗಳಿಗೆ ಆರ್ಥಿಕ ನೆರವು ನೀಡುವುದು ಒಂದು ಅವಶ್ಯಕವಾದ ಕಾರ್ಯ ಎಂದು ಭಾವಿಸಲಾಗಿದೆ. ಜೊತೆಗೆ ಏನೇ ಭಿನ್ನಾಭಿಪ್ರಾಯವಿದ್ದರೂ ಬಡರಾಷ್ಟ್ರಗಳು ಅನೇಕ ಸಲ ಶ್ರೀಮಂತರಾಷ್ಟ್ರಗಳಿಗೆ ಸಹಾಯ ಮಾಡಲು ಕೇಳಿ ಕೊಂಡಿವೆ. ನೆರವು ಒದಗಿಸುವ ರಾಷ್ಟ್ರದ ರಾಜಕೀಯ ಅಭಿಪ್ರಾಯಗಳು ಅನೇಕ ವೇಳೆ ನೆರವು ಪಡೆಯುವ ರಾಷ್ಟ್ರದ ರಾಜಕೀಯ ಅಭಿಪ್ರಾಯಗಳಿಗಿಂತ ಭಿನ್ನ ವಾಗಿದ್ದರೂ, ಆರ್ಥಿಕ ನೆರವು ಶ್ರೀಮಂತರಾಷ್ಟ್ರದಿಂದ ಬಡರಾಷ್ಟ್ರಕ್ಕೆ ಕೊಡಲ್ಪಡುತ್ತಿರುವುದನ್ನು ನಾವು ಈಗ ಕಾಣುತ್ತೇವೆ. ಮೊದಲ ಬಾರಿಗೆ ಮಾನವನ ಚರಿತ್ರೆ

ಯಲ್ಲಿ ಇಂತಹ ಒಂದು ಅಪೂರ್ವ ಸಂಬಂಧವನ್ನು ನಾವು ಈಗ ರಾಷ್ಟ್ರಗಳ ಮಧ್ಯೆ ಕಾಣುತ್ತಿದ್ದೇವೆ. ಎರಡನೆಯ ಮಹಾಯುದ್ಧವಾದ ಮೇಲಂತೂ ಆರ್ಥಿಕ ನೆರವಿನ ಚಟುವಟಿಕೆಗಳು ಬಹಳವಾಗಿ ಬೆಳೆದಿವೆ.

ಎರಡನೆ ಮಹಾಯುದ್ಧಕ್ಕೆ ಮೊದಲು ಕೂಡ ನಾವು ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಆರ್ಥಿಕ ನೆರವು ಬಂದಿರುವುದನ್ನು ನೋಡಿದ್ದೇವೆ. ಎರಡನೆಯ ಮಹಾ ಯುದ್ಧ ಕಾಲದಲ್ಲಿ ಬೃಹತ್ ಪ್ರಮಾಣದಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನಗಳು ಬ್ರಿಟನ್ ದೇಶಕ್ಕೆ ಒಪ್ಪಂದವ ಪ್ರಕಾರ ಸಾಲ ಕೊಟ್ಟು (Lend-lease) ಸಹಾಯ ಮಾಡಿತ್ತು. ಯುದ್ಧವಾದ ಕೂಡಲೇ ಯೂರೋಪಿನ ಅನೇಕ ರಾಷ್ಟ್ರಗಳಿಗೆ ಮಾರ್ಷಲ್ ಸಹಾಯ ಯೋಜನೆ ಪ್ರಕಾರ ಅಮೆರಿಕಾ ಆರ್ಥಿಕ ನೆರವು ನೀಡಿತು. ಆದರೆ ಮೇಲ್ಕಂಡ ನೆರವು ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳಿಗೆ ಮಾತ್ರ ದೊರೆಯಿತು.

ಎರಡನೆ ಮಹಾಯುದ್ಧವಾದ ಮೇಲೆ ಮೊದಲ ಬಾರಿಗೆ ಶ್ರೀಮಂತರಾಷ್ಟ್ರಗಳಿಂದ ಅನಭಿವೃದ್ಧ ಬಡರಾಷ್ಟ್ರಗಳಿಗೆ ಆರ್ಥಿಕ ನೆರವು ದೊರೆಯುವುದು ಪ್ರಾರಂಭವಾಯಿತು. 20ನೆ ಶತಮಾನದಲ್ಲಿ ಉಂಟಾದ ಮೂರು ಪ್ರಮುಖ ಘಟನೆಗಳಲ್ಲಿ ಇದು ಒಂದು ಎಂದು ಹೇಳಬಹುದು. ಚರಿತ್ರೆಯನ್ನು ನೋಡಿದರೆ ಇದುವರೆಗೆ ಪ್ರಮುಖ, ಬಲಿಷ್ಟ ಮತ್ತು ಶ್ರೀಮಂತ ರಾಷ್ಟ್ರಗಳು ತಮ್ಮ ದೇಶಗಳನ್ನು ಬಲಪಡಿಸಿಕೊಳ್ಳಲು ಅನಭಿವೃದ್ಧ ರಾಷ್ಟ್ರಗಳನ್ನು ತಮ್ಮ

ವಸಾಹತುಗಳನ್ನಾಗಿ ಮಾಡಿಕೊಂಡು ಅವುಗಳ ಆರ್ಥಿಕ ಸಂಪತ್ತನ್ನು ತಮ್ಮ ಸ್ವಹಿತಕ್ಕಾಗಿ ಉಪಯೋಗಿಸಿಕೊಳ್ಳುತ್ತಿದ್ದುದನ್ನು ಕಾಣುತ್ತೇವೆ. ಆದರೆ ಎರಡನೆಯ ಮಹಾಯುದ್ಧವಾದ ಮೇಲೆ ಸಾಮ್ರಾಜ್ಯಶಾಹಿ ರಾಷ್ಟ್ರಗಳು ತಮ್ಮ ಧೋರಣೆಯನ್ನು ಬಹುಮಟ್ಟಿಗೆ ಬದಲಾಯಿಸಿಕೊಂಡಿರುವುದನ್ನು ಕಾಣುತ್ತೇವೆ. (1) ಅಣುಶಕ್ತಿಯ ಉಪಯೋಗ ತಿಳಿದುಬಂದದ್ದು; (2) ಬಾಹ್ಯಾಕಾಶದಲ್ಲಿ ಮಾನವನು ನಡೆಸಿದ ಸಂಶೋಧನೆಗಳು ಮತ್ತು ಚಂದ್ರಲೋಕವನ್ನು ತಲುಪಿದ್ದು ಮತ್ತು (3) ಶ್ರೀಮಂತ ರಾಷ್ಟ್ರಗಳು ಹಿಂದುಳಿದ ರಾಷ್ಟ್ರಗಳ ವಿಷಯದಲ್ಲಿ ಅನುಕಂಪನೆ ತೋರಿಸಿದ್ದು—ಈ ಮೂರು 20ನೆ ಶತಮಾನದ ಪ್ರಮುಖ ಘಟನೆಗಳೆಂದು ಹೇಳಬಹುದು. ಈ ಮೂರರ ಪೈಕಿ ಮಾನವೀಯತೆಯ ದೃಷ್ಟಿಯಿಂದ ಮೂರನೆಯದು ಬಹಳ ಮುಖ್ಯವಾದದ್ದು ಎಂದು ಹೇಳಬಹುದು.

ಏಷ್ಯ, ಆಫ್ರಿಕಾ ಮತ್ತು ದಕ್ಷಿಣಅಮೆರಿಕ ಖಂಡಗಳಲ್ಲಿರುವ ಬಡದೇಶಗಳಲ್ಲಿ ವಾಸಿಸುವ ಕೋಟ್ಯಾಂತರ ಜನರು ತಮಗೆ ಒದಗಿರುವ ಬಡತನ, ನಿರುದ್ಯೋಗ ಮತ್ತು ಹಸಿವುಗಳ ವಿಷಯವಾಗಿ ಯೋಚಿಸಲು ಪ್ರಾರಂಭಿಸಿದರು. ಮೇಲ್ಕಂಡ ತೊಂದರೆಗಳು ತಮ್ಮ ಹೀನ ಅದೃಷ್ಟದಿಂದ ಉಂಟಾದುವಲ್ಲವೆಂದು ತಿಳಿದುಕೊಂಡರು. ಆದರೆ ಬದಲು ಚರಿತ್ರೆಯ ಕಾರಣಗಳಿಂದ ಉಂಟಾದವು ಎಂಬುದನ್ನು ಅರಿತು ಅವುಗಳನ್ನು ತೊಡೆದುಹಾಕಲು ನಿರ್ಧಾರಕೈಗೊಂಡರು. ಇದೇ ರೀತಿ ಅಭಿವೃದ್ಧಿ ಹೊಂದಿರುವ

ಶ್ರೀಮಂತರಾಷ್ಟ್ರಗಳಲ್ಲಿರುವ ಅನೇಕ ಜನರು ತಮಗೆ ಬಂದಿರುವ ಸುಖ ಸಂಪತ್ತುಗಳು ಕೇವಲ ತಮ್ಮ ಶ್ರೇಷ್ಠತೆಯಿಂದ ಬಂದವುಗಳಲ್ಲವೆಂದು ತಿಳಿದುಕೊಂಡರು. ಅದರ ಬದಲು ತಮ್ಮ ರಾಷ್ಟ್ರಗಳು ಹಿಂದೆ ಕೈಗೊಂಡ ರಾಜಕೀಯ ನೀತಿಗಳಿಂದ ಉಂಟಾದವು ಎಂಬುದನ್ನು ಅರಿತರು. ಇನ್ನು ಮುಂದೆ ಬಡರಾಷ್ಟ್ರಗಳಲ್ಲಿರುವ ಜನರ ಸ್ಥಿತಿಗತಿಗಳನ್ನು ಹಾಗೆ ಮುಂದುವರಿಸಿಕೊಂಡುಹೋಗಲು ಬಿಟ್ಟರೆ ಅದರಿಂದ ಅಪಾಯ ಒದಗುವುದು ಎಂದು ಅರಿತು, ಬಡರಾಷ್ಟ್ರಗಳಲ್ಲಿರುವ ಜನರ ಆರ್ಥಿಕ ಜೀವನವನ್ನು ಉತ್ತಮಪಡಿಸಲು ತಮ್ಮ ಕೈಲಾದ ನೆರವು ನೀಡುವುದು ತಮ್ಮ ಪ್ರಮುಖ ಕರ್ತವ್ಯವೆಂದು ಶ್ರೀಮಂತ ರಾಷ್ಟ್ರಗಳ ಜನರು ನಿರ್ಧರಿಸಿದರು. ಈ ನಿರ್ಧಾರದ ಪರಿಣಾಮವಾಗಿಯೇ ಒಂದು ದೇಶವು ಮತ್ತೊಂದು ದೇಶಕ್ಕೆ ಆರ್ಥಿಕ ನೆರವು ನೀಡುವ ಪದ್ಧತಿಯು ಜಾರಿಗೆ ಬಂದಿತು.

ಎರಡನೆ ಮಹಾಯುದ್ಧದ ಪರಿಣಾಮವಾಗಿ ಶಕ್ತಿಬಣಗಳಲ್ಲಿ ಅನೇಕ ಬದಲಾವಣೆಗಳಾದವು. ಯೂರೋಪಿನ ರಾಷ್ಟ್ರಗಳು ರಾಜಕೀಯವಾಗಿಯೂ ಮತ್ತು ಆರ್ಥಿಕವಾಗಿಯೂ ತಮ್ಮ ಪ್ರಮುಖ ಸ್ಥಾನವನ್ನು ಕಳೆದುಕೊಂಡವು. ಪ್ರಪಂಚದ ಅನೇಕ ಕಡೆಗಳಲ್ಲಿ ಸಾಮ್ರಾಜ್ಯಶಾಹಿ ರಾಷ್ಟ್ರಗಳು ತಮ್ಮ ವಸಾಹತುಗಳಿಗೆ ಸ್ವಾತಂತ್ರ್ಯ ಕೊಡಬೇಕಾಯಿತು. ಸ್ವತಂತ್ರಗೊಂಡ ರಾಷ್ಟ್ರಗಳು ಅಂತರರಾಷ್ಟ್ರ ವ್ಯವಹಾರಗಳಲ್ಲಿ ತಮ್ಮ ಪ್ರಭಾವ ಬೀರಲಾರಂಭಿಸಿದುವು. ಎರಡನೆಯ ಮಹಾಯುದ್ಧಕ್ಕೆ ಮುಂಚೆ ಸೋವಿಯಟ್

ದೇಶ ಒಂದರಲ್ಲಿ ಮಾತ್ರ ಕಮ್ಯುನಿಸ್ಟ್ ಪದ್ಧತಿಯ ರಾಜ್ಯಾಂಗ ವ್ಯವಸ್ಥೆ ಇತ್ತು. ಯುದ್ಧವಾದ ಮೇಲೆ ಬಹು ದೊಡ್ಡ ದೇಶವಾದ ಚೈನಾದಲ್ಲಿಯೂ ಕಮ್ಯುನಿಸ್ಟ್ ಪದ್ಧತಿಯು ಜಾರಿಗೆ ಬಂದಿತು. ಚೈನಾ ಮತ್ತು ರಷ್ಯಾ ದೇಶಗಳು ಕಮ್ಯುನಿಸ್ಟ್ ಪ್ರಭಾವವನ್ನು ಪಕ್ಕದ ಏಷ್ಯಾ ಮತ್ತು ಯೂರೋಪಿನ ರಾಷ್ಟ್ರಗಳಿಗೆ ವಿಸ್ತರಿಸಲು ಪ್ರಾರಂಭಿಸಿದವು. ಈ ಹೊಸ ಪ್ರಭಾವವನ್ನು ಕಂಡು ಯೂರೋಪಿನ ಪ್ರಮುಖ ರಾಷ್ಟ್ರಗಳು ಮತ್ತು ಅಮೆರಿಕಾದ ಸಂಯುಕ್ತ ಸಂಸ್ಥಾನಗಳು ತವಕಪಡಲಾರಂಭಿಸಿದುವು. ತಮ್ಮ ವಿದೇಶೀಯ ನೀತಿಯನ್ನು ಮತ್ತು ಆರ್ಥಿಕ ಧೋರಣೆಯನ್ನು ಬದಲಾದ ಸನ್ನಿವೇಶಗಳಿಗೆ ತಕ್ಕ ಹಾಗೆ ಮಾರ್ಪಡಿಸಿಕೊಳ್ಳದಿದ್ದರೆ ಕಮ್ಯುನಿಸ್ಟ್ ಪ್ರಭಾವವು ಹಿಂದುಳಿದ ರಾಷ್ಟ್ರಗಳಿಗೆಲ್ಲಾ ಹಬ್ಬಿ ಪ್ರಜಾಪ್ರಭುತ್ವ ಪದ್ಧತಿಗೆ ಧಕ್ಕೆ ಬರುತ್ತದೆ ಎಂದು ಪಾಶ್ಚಿಮಾತ್ಯ ರಾಷ್ಟ್ರಗಳ ಪೈಕಿ ಮೊದಲು ಬ್ರಿಟನ್, ಫ್ರಾನ್ಸ್, ಕೆನಡ ಮತ್ತು ಅಮೆರಿಕಾ ಸಂಯುಕ್ತ ಸಂಸ್ಥಾನಗಳು ತಿಳಿದುಕೊಂಡವು. ಹಿಂದುಳಿದ ರಾಷ್ಟ್ರಗಳ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ತಕ್ಕ ಕಾರ್ಯಗಳನ್ನು ಕೈಗೊಳ್ಳಬೇಕೆಂದು ನಿರ್ಧರಿಸಿದವು. ಅವುಗಳು ಮೊದಲಿನ ಹಾಗೆ ಬಡತನ ಮತ್ತು ಹಸಿವುಗಳಿಂದ ನರಳಲು ಬಿಡಬಾರದೆಂದು ತೀರ್ಮಾನಿಸಲಾಯಿತು.

ಅಮೆರಿಕದ ಸಂಯುಕ್ತ ಸಂಸ್ಥಾನಗಳಂತೂ ಬದಲಾದ ಸ್ಥಿತಿಗಳನ್ನು ಗಮನಕ್ಕೆ ತಂದುಕೊಂಡು ತೀವ್ರವಾಗಿ

ಯೋಚಿಸಲಾರಂಭಿಸಿದುವು. ಏನೇ ಆದರೂ ಕಮ್ಯುನಿಸ್ಟ ಪ್ರಭಾವ ಆಫ್ರಿಕಾ, ಏಷ್ಯಾ ಮತ್ತು ದಕ್ಷಿಣಅಮೆರಿಕಾ ದೇಶಗಳಲ್ಲಿ ಹಬ್ಬದಂತೆ ನೋಡಿಕೊಳ್ಳಬೇಕೆಂದು ತೀರ್ಮಾನಿಸಿತು. ಆದುದರಿಂದ ನೂತನ ಆರ್ಥಿಕ ಧೋರಣೆಯನ್ನು ರೂಪಿಸಿಕೊಳ್ಳಲು ಪ್ರಾರಂಭಿಸಿತು. ಆರ್ಥಿಕವಾಗಿ ಹಿಂದುಳಿದಿರುವ ಎಲ್ಲಾ ಬಡದೇಶಗಳಲ್ಲಿ ಕ್ರಮೇಣ ಸ್ಥಿಮಿತಯುತ ಆರ್ಥಿಕಾಭಿವೃದ್ಧಿಯನ್ನು ಉಂಟುಮಾಡಬೇಕೆಂಬುದೇ ಅಮೆರಿಕಾದ ವಿದೇಶೀಯ ಆರ್ಥಿಕ ಧೋರಣೆಯ ಮುಖ್ಯ ಗುರಿಯಾಯಿತು. ಇದನ್ನು ಸಾಧಿಸಲು ಹಿಂದುಳಿದ ರಾಷ್ಟ್ರಗಳಿಗೆ ಅಮೆರಿಕಾವೆ ಮೊದಲು ಆರ್ಥಿಕ ನೆರವು ನೀಡುವ ಕಾರ್ಯವನ್ನು ಪ್ರಾರಂಭಿಸಬೇಕೆಂದು ತೀರ್ಮಾನಿಸಿತು. ಅಮೆರಿಕಾವು ಪ್ರಾರಂಭಮಾಡಿದ ಕಾರ್ಯಗಳನ್ನು ಗಮನಿಸಿ ಇನ್ನೂ ಕೆಲವು ಅಭಿವೃದ್ಧಿ ಹೊಂದಿರುವ ಪಾಶ್ಚಿಮಾತ್ಯ ರಾಷ್ಟ್ರಗಳೂ ಕೂಡ ಹಿಂದುಳಿದ ರಾಷ್ಟ್ರಗಳ ಸಹಾಯಕ್ಕೆ ಬರಲು ನಿರ್ಧರಿಸಿದುವು. ಅನೇಕ ರಾಷ್ಟ್ರಗಳಿಗೆ ಅಮೆರಿಕಾ ಎಚ್ಚರಿಕೆ ನೀಡಿ ಅವುಗಳೂ ಕೂಡ ಹಿಂದುಳಿದ ರಾಷ್ಟ್ರಗಳಿಗೆ ಆರ್ಥಿಕ ನೆರವು ನೀಡುವ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವಂತೆ ಮಾಡಿತು. ಹೀಗೆ ಪ್ರಪಂಚದಲ್ಲಿ ಮೊದಲ ಬಾರಿಗೆ ಆರ್ಥಿಕ ನೆರವು ನೀಡುವ ಪದ್ಧತಿಯು ವಿಶಾಲ ತಳಹದಿಯ ಮೇಲೆ 1950ರಿಂದ ಪ್ರಾರಂಭವಾಯಿತೆಂದು ಹೇಳಬಹುದು.

ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಿಗೆ ನೆರವು

ನೀಡುತ್ತಿರುವ ರಾಷ್ಟ್ರಗಳ ಪೈಕಿ ಅಮೆರಿಕಾವು ಮೊದಲನೆಯ ಸ್ಥಾನ ಪಡೆದಿದೆ. ಇಂಡಿಯಾ ದೇಶವು 1950 ರಿಂದ ಈಚೆಗೆ ಅನೇಕ ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳಿಂದ ಆರ್ಥಿಕ ನೆರವು ಪಡೆಯುತ್ತಿದೆ. ಆದರೆ ಅಮೆರಿಕಾವು ಇಂಡಿಯಾಕ್ಕೆ ಅತಿ ಹೆಚ್ಚಿನ ಆರ್ಥಿಕ ನೆರವು ನೀಡಿದೆ. ೪ನೇ ಪುಟವಲ್ಲಿನ ಪಟ್ಟಿಯು ಇಂಡಿಯಾ ದೇಶಕ್ಕೆ ಬಂದಿರುವ ಆರ್ಥಿಕ ಸಹಾಯದ ಸ್ವರೂಪವನ್ನು ತಿಳಿಸುತ್ತದೆ (1950 ರಿಂದ 1968ರ ಪೂರ್ತಾ) ಈ ಪಟ್ಟಿಯನ್ನು ಪರಿಶೀಲಿಸಿದರೆ ಇಂಡಿಯಾಕ್ಕೆ ವಿವಿಧ ರಾಷ್ಟ್ರಗಳಿಂದ ಬಂದಿರುವ ಒಟ್ಟು ಆರ್ಥಿಕ ನೆರವಿನ ಪೈಕಿ ಶೇಕಡಾ 54ರಷ್ಟು ಅಮೆರಿಕಾ ದೇಶ ಒಂದ ರಿಂದಲೇ ಬಂದಿದೆ ಎಂದು ತಿಳಿದುಬರುತ್ತದೆ. ಪ್ರಪಂಚದ ವಿವಿಧ ರಾಷ್ಟ್ರಗಳಿಗೆ ಅಮೆರಿಕಾ 75,000 ಕೋಟಿ ರೂ. ಮೊತ್ತದಷ್ಟು ನೆರವು ನೀಡಿದೆ. ಇದರ ಪೈಕಿ ಶೇಕಡಾ 9ರಷ್ಟು ನೆರವು ಇಂಡಿಯಾಕ್ಕೆ ದೊರೆತಿದೆ.[1] ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿದರೆ ಕೆಲವು ಮುಖ್ಯ ಪ್ರಶ್ನೆಗಳು ಉದ್ಭವಿಸುತ್ತವೆ. (1) ಅಮೆರಿಕಾವು ಏತಕ್ಕಾಗಿ ಇಷ್ಟೊಂದು ನೆರವನ್ನು ಇಂಡಿಯಾಕ್ಕೆ ಕೊಟ್ಟಿದೆ ? (2) ಇಂಡಿಯಾ ದೇಶವು ಇಷ್ಟೊಂದು ನೆರವನ್ನು ಏತಕ್ಕಾಗಿ ಒಪ್ಪಿಕೊಂಡಿತು ? (3) ಈ ಆರ್ಥಿಕ ನೆರವಿನ ಪರಿಣಾಮ ಗಳೇನು ? (4) ಈ ನೆರವಿನ ಮೂಲ ಉದ್ದೇಶಗಳು ಸಾಧಿಸಲ್ಪಟ್ಟಿವೆಯೆ ?

---

1 ಅಮೆರಿಕನ್ ರಿಪೋರ್ಟರ್, ಆಗಸ್ಟ್ 27, 1969, ಪುಟ 1

**ಪಟ್ಟಿ I†**

| ಸಹಾಯ ಒದಗಿಸಿರುವ ರಾಷ್ಟ್ರಗಳು ಅಥವ ಸಂಸ್ಥೆಗಳು | | ಸಹಾಯದ ಮೊತ್ತ (ಕೋಟಿ ರೂಪಾಯಿಗಳಲ್ಲಿ) | ಒಟ್ಟು ಸಹಾಯದ ಶೇಕಡಾವಾರು |
|---|---|---|---|
| 1. ಅಂತರರಾಷ್ಟ್ರೀಯ ಅಭಿವೃದ್ಧಿ ಬ್ಯಾಂಕು ಮತ್ತು ಅಂತರರಾಷ್ಟ್ರೀಯ ಅಭಿವೃದ್ಧಿ ಸಂಘ | .... | 1,422 | 11.9 |
| 2. ಅಮೆರಿಕಾದ ಸಂಯುಕ್ತ ಸಂಸ್ಥಾನಗಳು | .... | 6,361* | 53.4 |
| 3. ಪಶ್ಚಿಮ ಜರ್ಮನಿ | .... | 802 | 6.9 |
| 4. ಸೋವಿಯೆಟ್ ರಷ್ಯಾ | .... | 1,032 | 8.6 |
| 5. ಬ್ರಿಟನ್ | .... | 620 | 5.2 |
| 6. ಇತರರು | .... | 1,659 | 14.0 |
| ಮೊತ್ತ | .... | 11,896 | 100.0 |

†ಆಧಾರ : ಅಮೆರಿಕನ್ ರಿಪೋರ್ಟರ್ ಪತ್ರಿಕೆಯ ವಿಶೇಷ ಸಂಚಿಕೆ ; ಅಕ್ಟೋಬರ್ 23, 1968 ; ಪುಟ 8.

* ಜೂನ್ 1969 ರ ಕೊನೆಯ ತನಕ ಅಮೆರಿಕಾ ಕೊಟ್ಟಿರುವ ನೆರವು 6,771 ಕೋಟಿ ರೂ. ಮೊತ್ತ ತಲುಪಿದೆ.

ಈ ಮೇಲ್ಕಂಡ ಪ್ರಶ್ನೆಗಳಿಗೆ ಉತ್ತರ ನೀಡಬೇಕಾದರೆ ನಾವು ಈ ಕೆಲವು ಅಂಶಗಳನ್ನು ಪರಿಶೀಲಿಸಬೇಕಾಗುತ್ತದೆ. (1) ಆರ್ಥಿಕ ನೆರವನ್ನು ಕೊಡುವಾಗ ಅಮೆರಿಕಾ ಯಾವ ಉದ್ದೇಶಗಳನ್ನು ಇಟ್ಟುಕೊಂಡಿದೆ; (2) ಇಂಡಿಯಾ ಯಾವ ಉದ್ದೇಶಗಳನ್ನಿಟ್ಟುಕೊಂಡು ನೆರವನ್ನು ಒಪ್ಪಿಕೊಂಡಿತು; (3) ಇದುವರೆಗೆ ಅಮೆರಿಕಾ ಯಾವ ರೂಪಗಳಲ್ಲಿ ನೆರವು ನೀಡಿದೆ; (4) ಎಷ್ಟರ ಮಟ್ಟಿಗೆ ಅಮೆರಿಕಾ ಮತ್ತು ಇಂಡಿಯಾ ದೇಶಗಳ ಹಿತಾಸಕ್ತಿಗಳು ಸಾಧಿಸಲ್ಪಟ್ಟಿವೆ; ಮುಂದಿನ ಅಧ್ಯಾಯಗಳಲ್ಲಿ ಮೇಲ್ಕಂಡ ಅಂಶಗಳನ್ನು ಕುರಿತು ಚರ್ಚಿಸಲಾಗುವುದು. ಇದಲ್ಲದೆ ಅಮೆರಿಕಾ ಮತ್ತು ಇಂಡಿಯಾ ದೇಶಗಳಲ್ಲಿ ಅನೇಕ ಪ್ರಮುಖರು ಅಮೆರಿಕಾ ಆರ್ಥಿಕ ಸಹಾಯವನ್ನು ಕುರಿತು ವಿಪರೀತವಾಗಿ ಟೀಕೆ ಮಾಡಿದ್ದಾರೆ. ಅವರು ಮಾಡಿರುವ ಟೀಕೆಗಳೇನು ಮತ್ತು ಅವು ಎಷ್ಟರ ಮಟ್ಟಿಗೆ ಸತ್ಯಾಂಶದಿಂದ ಕೂಡಿವೆ ಎಂಬುದನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ.

## ೨. ಆರ್ಥಿಕ ನೆರವಿನ ಉದ್ದೇಶಗಳು

ಕಳೆದ 20 ವರ್ಷಗಳಲ್ಲಿನ (1950–70) ಇಂಡಿಯಾ ದೇಶದ ಅನುಭವವನ್ನು ಪರಿಶೀಲಿಸಿದರೆ ಯಾವ ರಾಷ್ಟ್ರವೇ ಆಗಲಿ ತನ್ನ ಸ್ವಹಿತ ರಕ್ಷಣೆಗೆ ಗಮನಕೊಡದೆ ಆರ್ಥಿಕ ನೆರವು ನೀಡುವುದಿಲ್ಲ ಎಂಬುದು ಸ್ಪಷ್ಟವಾಗಿದೆ. ಇಂಡಿಯಾ ದೇಶಕ್ಕೆ ನೆರವು ನೀಡುವುದರಿಂದ ತನಗೆ ಒರುವ ಅನುಕೂಲಗಳೇನು ಎಂದು ಪ್ರತಿಯೊಂದು ಶ್ರೀಮಂತ ರಾಷ್ಟ್ರವೂ ಯೋಚಿಸುತ್ತದೆ. ಅಮೆರಿಕಾವೂ ಕೂಡ ಇಂಡಿಯಾಕ್ಕೆ ಆರ್ಥಿಕ ನೆರವು ನೀಡುವಾಗ ಕೆಲವು ಉದ್ದೇಶಗಳನ್ನು ಇರಿಸಿಕೊಂಡು ಕೊಡುತ್ತಿದೆ ಎಂಬುದು ತಿಳಿದುಬರುತ್ತದೆ. ಅಮೆರಿಕಾದ ಅಧ್ಯಕ್ಷರುಗಳು ಮತ್ತು ಪ್ರಮುಖ ನಾಯಕರುಗಳು ಆಗಿಂದಾಗ್ಗೆ ಕೊಟ್ಟಿರುವ ಹೇಳಿಕೆಗಳನ್ನು ಪರಿಶೀಲಿಸಿದರೆ ಅಮೆರಿಕಾದ ಉದ್ದೇಶಗಳೇನು ಎಂಬುದು ಚೆನ್ನಾಗಿ ತಿಳಿದುಬರುತ್ತದೆ. ಆರ್ಥಿಕ ನೆರವಿನ ಸಮಸ್ಯೆಯನ್ನು ಅಧ್ಯಯನ ಮಾಡುವುದಕ್ಕೋಸ್ಕರ ನಾವು ಅಮೆರಿಕಾದ ಉದ್ದೇಶಗಳನ್ನು ಸಾಮಾನ್ಯವಾಗಿ ಮೂರು ಗುಂಪುಗಳನ್ನಾಗಿ ವಿಂಗಡಿಸಬಹುದು. ಅವು ಯಾವುವೆಂದರೆ (1) ರಾಜಕೀಯ ಉದ್ದೇಶಗಳು; (2) ಆರ್ಥಿಕ ಉದ್ದೇಶಗಳು ಮತ್ತು (3) ಪರೋಪಕಾರ ದೃಷ್ಟಿ.

### ರಾಜಕೀಯ ಉದ್ದೇಶಗಳು

ಅಮೆರಿಕಾದ ಮಾಜಿ ಅಧ್ಯಕ್ಷರಾಗಿದ್ದ ಐಸೆನ್ ಹೋವೆರ್‌ರವರು 1957ರಲ್ಲಿ ಅಮೆರಿಕಾದ ಕಾಂಗ್ರೆಸ್

ಸಭೆಗಳಿಗೆ ಸಂದೇಶವನ್ನು ಕಳುಹಿಸುವಾಗ ಆರ್ಥಿಕ ನೆರವನ್ನು ಕೊಡುವುದರ ಉದ್ದೇಶವನ್ನು ಕುರಿತು ಹೀಗೆ ಹೇಳಿದ್ದಾರೆ. "ಸೋವಿಯತ್ ದೇಶ ಮತ್ತು ಚೈನಾ ದೇಶಗಳ ಅಕ್ಕಪಕ್ಕಗಳಲ್ಲಿ ವಾಸಿಸುವ ಲಕ್ಷಾಂತರ ಜನರಿಗೆ ರಾಜಕೀಯ ಸ್ವಾತಂತ್ರ್ಯ ಈಗ ತಾನೆ ದೊರೆತಿದೆ. ಅನೇಕ ರಾಷ್ಟ್ರಗಳು ತಾವು ದೊರಕಿಸಿಕೊಂಡಿರುವ ರಾಜಕೀಯ ಸ್ವಾತಂತ್ರ್ಯವನ್ನು ಇನ್ನೂ ಉಪಯೋಗಿಸಿಕೊಂಡಿಲ್ಲ. ಸ್ವಾತಂತ್ರ್ಯದ ಫಲವು ತಮ್ಮ ಜನಗಳಿಗೆ ಗೊತ್ತಾಗುವಂತೆ ಮಾಡಬೇಕಾದರೆ ಅನೇಕ ಶತಮಾನಗಳಿಂದ ತಮ್ಮ ದೇಶಗಳಲ್ಲಿ ಬೆಳೆದುಕೊಂಡು ಬಂದಿರುವ ಬಡತನವನ್ನು ತೊಡೆದು ಹಾಕಲು ಆ ದೇಶಗಳು ಯತ್ನಿಸಬೇಕು. ಸ್ವಾತಂತ್ರ್ಯದ ಫಲವಾಗಿ ತಮ್ಮ ದೇಶಗಳನ್ನು ಅಭಿವೃದ್ಧಿಗೊಳಿಸಬೇಕೆಂಬ ಮಹದಾಸೆ ಅಲ್ಲಿಯ ಜನರಿಗೆ ಮೂಡಿಬಂದಿದೆ.

ಆದರೆ ಹೊರಗಿನ ಸಹಾಯವಿಲ್ಲದೆ, ಹೊಸದಾಗಿ ಸ್ವಾತಂತ್ರ್ಯ ಪಡೆದ ರಾಷ್ಟ್ರಗಳು ತಮ್ಮ ಆರ್ಥಿಕ ಪ್ರಗತಿಯನ್ನು ಸಾಧಿಸಲಾರವು. ತಮ್ಮ ದೇಶದ ಜನರಿಗೆ ಸಾಕಷ್ಟು ಪ್ರಗತಿ ಸಾಧಿಸಬಲ್ಲೆವು ಎಂಬುದನ್ನು ತೋರಿಸಿ ಕೊಡಬೇಕಾದರೆ ಹೊರದೇಶಗಳ ಆರ್ಥಿಕ ನೆರವು ಅತ್ಯಾವಶ್ಯಕ. ಸಾಕಷ್ಟು ನೆರವು ದೊರೆಯದೆ ಇದ್ದರೆ ಈ ದೇಶಗಳಲ್ಲಿ ರಾಜಕೀಯ ಸ್ಥಿರತೆ ಉಳಿಯುವುದಿಲ್ಲ. ಆಗ ಈ ದೇಶಗಳಲ್ಲಿರುವ ತೀವ್ರಗಾಮಿ ಜನರು ಅಧಿಕಾರ ಕಸಿದುಕೊಂಡು ರಾಜಕೀಯ ಆಂದೋಳನ ಪ್ರಾರಂಭಿಸು

ತ್ತಾರೆ. ಇದರಿಂದ ಪ್ರಪಂಚದ ಅನೇಕ ಕಡೆ ಶಾಂತಿಗೆ ಧಕ್ಕೆ ಬರುತ್ತದೆ. ಇದರಿಂದ ನಮಗೂ (ಅಮೆರಿಕಾ ಜನರಿಗೂ) ತೊಂದರೆ ಉಂಟಾಗುತ್ತದೆ.

ಆದುದರಿಂದ ಇಂತಹ ರಾಜಕೀಯ ಪರಿಣಾಮಗಳು ಉಂಟಾಗುವುದನ್ನು ತಡೆಗಟ್ಟಲು ನಾವು ಕಮ್ಯುನಿಸ್ಟ್ ದೇಶಗಳ ಅಕ್ಕಪಕ್ಕದಲ್ಲಿರುವ ದೇಶಗಳ ಜನರಿಗೆ ಆರ್ಥಿಕ ನೆರವು ಕೊಡಬೇಕು." [2]

ಮಾಜಿ ಅಧ್ಯಕ್ಷರಾಗಿದ್ದ ಕೆನೆಡಿಯವರು ಇನ್ನೂ ಅಧ್ಯಕ್ಷ ಪದವಿಗೆ ಬರದೆ, ಅಮೆರಿಕದ ಸೆನೆಟ್ ಸಭೆಯ ಸದಸ್ಯರಾಗಿದ್ದಾಗ 1959ರಲ್ಲಿ ಸೆನೆಟ್ ಸಭೆಯ ಮುಂದೆ ಒಂದು ಠರಾವನ್ನು ಮಂಡಿಸಿದರು. ಆಗ ಈ ರೀತಿ ಹೇಳಿಕೆ ನೀಡಿದರು. "ಇಂಡಿಯಾ ದೇಶವು ಒಂದೇ ಸಮನೆ ಜೀವಂತವಾಗಿದ್ದು ತನ್ನ ಕಾರ್ಯಗಳಲ್ಲಿ ಜಯ ಗಳಿಸುವುದು ಪ್ರಜಾಪ್ರಭುತ್ವದಲ್ಲಿ ವಿಶ್ವಾಸವಿಟ್ಟಿರುವ ಎಲ್ಲಾ ದೇಷಗಳ ದೃಷ್ಟಿಯಿಂದಲೂ ಹಿತಕರ. ಏಕೆಂದರೆ ಇಂಡಿಯಾ ದೇಶವು ರಾಜಕೀಯ ದೃಷ್ಟಿಯಿಂದ ಗಣ್ಯ ಸ್ಥಾನ ಪಡೆದಿದೆ. ವಿಶಾಲವಾದ ಭೂಪ್ರದೇಶ ಪಡೆದಿದೆ ಮತ್ತು 40 ಕೋಟಿಗಿಂತ ಹೆಚ್ಚಿಗೆ ಜನರು ಅಲ್ಲಿ ವಾಸಿಸುತ್ತಾರೆ; ಯುದ್ಧ ಕೌಶಲ್ಯದ ದೃಷ್ಟಿಯಿಂದಲೂ ಮತ್ತು ಭೌಗೋಳಿಕ ದೃಷ್ಟಿಯಿಂದಲೂ ಇಂಡಿಯಾ

---

[2] "ಪರಸ್ಪರ-ಭದ್ರತೆಯನ್ನು ಕಾಪಾಡಿಕೊಳ್ಳುವ ಯೋಜನೆ"—ಅಮೆರಿಕಾ ಸಂಯುಕ್ತ ಸಂಸ್ಥಾನಗಳ ವಿದೇಶಾಂಗ ಇಲಾಖೆಯ ಪ್ರಕಟಣೆ; ಜೂನ್ 10, 1957; ಪುಟ 921

ದೇಶ ಪ್ರಮುಖ ಸ್ಥಾನ ಪಡೆದಿದೆ; ಆರ್ಥಿಕವಾಗಿಯೂ ಇಂಡಿಯಾ ದೇಶ ವ್ಯವಸ್ಥಿತ ರೀತಿಯಲ್ಲಿ ತನ್ನ ದೇಶದ ಅಭಿವೃದ್ಧಿ ಸಾಧಿಸಲು ಪ್ರಯತ್ನಿಸಿದೆ; ನೈತಿಕವಾಗಿಯೂ ಇಂಡಿಯಾ ದೇಶ ಘನ ಉದ್ದೇಶಗಳನ್ನು ಇರಿಸಿಕೊಂಡು ಪ್ರಜಾಪ್ರಭುತ್ವದ ತತ್ವಗಳಿಗಾಗಿ ಕಟ್ಟುಬಿದ್ದಿದೆ." ಆದುದರಿಂದ ಇಂಡಿಯಾ ದೇಶಕ್ಕೆ ದೊಡ್ಡ ಪ್ರಮಾಣದಲ್ಲಿ ಅಮೆರಿಕಾ ಆರ್ಥಿಕ ನೆರವು ನೀಡಬೇಕೆಂದು ವಾದಿಸಿದರು.[3]

ಅಧ್ಯಕ್ಷರಾದ ಮೇಲೆ 1961ರಲ್ಲಿ ಅಮೆರಿಕಾದ ಶಾಸನ ಸಭೆಗಳಿಗೆ ಸಂದೇಶವನ್ನು ಕಳುಹಿಸುತ್ತಾ ಹೀಗೆಂದರು. "ಈಗತಾನೆ ಸ್ವಾತಂತ್ರ್ಯ ಪಡೆದಿರುವ ಮತ್ತು ಹಿಂದುಳಿದಿರುವ ರಾಷ್ಟ್ರಗಳು ಈಗ ಆರ್ಥಿಕ ಪ್ರಗತಿಯನ್ನು ಸಾಧಿಸುವ ಪಥದಲ್ಲಿವೆ. ತಮ್ಮ ಯತ್ನದಲ್ಲಿ ಅವು ಕುಸಿದು ಬಿದ್ದರೆ, ಅದರ ದುಷ್ಪರಿಣಾಮಗಳು ನಮ್ಮ ರಾಷ್ಟ್ರದ ಭದ್ರತೆಯ ಮೇಲೂ ಮತ್ತು ಯಶಸ್ಸಿನ ಮೇಲೂ ಉಂಟಾಗುತ್ತವೆ. ಇಂತಹ ಪರಿಸ್ಥಿತಿಯನ್ನು ನೋಡುವುದಕ್ಕೆ ನಮ್ಮ ಆತ್ಮವು ಒಪ್ಪುವುದಿಲ್ಲ. ಆದುದರಿಂದ ನಾವು ಅವುಗಳ ನೆರವಿಗೆ ಹೋಗಬೇಕು."[4]

ಅಧ್ಯಕ್ಷ ಜಾನ್‌ಸನ್‌ರವರು 1964ರಲ್ಲಿ ತಮ್ಮ ಸಂದೇಶ ಕಳುಹಿಸುತ್ತಾ ಹೀಗೆಂದರು. "ಈಗತಾನೆ

---

[3] ಪಿ. ಟಿ. ಬಾಯರ್ : ಇಂಡಿಯಾದ ಆರ್ಥಿಕ ಅಭಿವೃದ್ಧಿಗೆ ಅಮೆರಿಕಾದ ಸಹಾಯ ; ವಾಷಿಂಗ್‌ಟನ್, 1959 : ಪುಟ 1-2

[4] ಅಮೆರಿಕಾದ ವಿದೇಶಾಂಗ ಇಲಾಖೆಯ ಪ್ರಕಟಣೆ ; ಏಪ್ರಿಲ್ 10, 1961 ; ಪುಟ 507-514

ಸ್ವಾತಂತ್ರ್ಯಗಳಿಸಿರುವ ದೇಶಗಳಲ್ಲಿರುವ ಜನರು ತಮ್ಮ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳುವುದರಲ್ಲಿ ಮತ್ತು ಜೀವನಮಟ್ಟವನ್ನು ಉತ್ತಮಪಡಿಸಿಕೊಳ್ಳುವುದರಲ್ಲಿ ತೊಡಗಿದ್ದಾರೆ. ನಾವು ಅವರ ಕಾರ್ಯಗಳು ಶಕ್ತಿಯುತವಾಗುವಂತೆ ಮಾಡಿ, ಆ ದೇಶಗಳಲ್ಲಿರುವ ಬಡತನವನ್ನು ದುರುಪಯೋಗಪಡಿಸಿಕೊಂಡು ವಿಧ್ವಂಸಕ ಕಾರ್ಯಗಳು ಹರಡುವಂತೆ ಮಾಡಬೇಕೆಂದಿರುವ ಹೊರಗಿನವರಿಗೆ ಆಶಾಭಂಗವನ್ನುಂಟುಮಾಡಬೇಕು. ಇದು ಫಲಿಸಬೇಕಾದರೆ ಶ್ರೀಮಂತ ದೇಶಗಳು ಬಡದೇಶಗಳ ನೆರವಿಗೆ ಬರಬೇಕು. ನಾವು ನಮ್ಮ ಪಾಲಿನ ಕರ್ತವ್ಯವನ್ನು ಪೂರೈಸಬೇಕು.[5]

ಅಮೆರಿಕಾದ ವಿದೇಶಾಂಗ ಉಪಕಾರ್ಯದರ್ಶಿಗಳಾದ ಶ್ರೀ ಲೀಮಾಂಡ್ ಹ್ಯಾರಿರವರು 1966ರಲ್ಲಿ ಇಂಡಿಯ ಮತ್ತು ಪಾಕಿಸ್ತಾನಕ್ಕೆ ನೆರವು ನೀಡುವ ವಿಷಯದಲ್ಲಿ ಹೇಳಿಕೆ ಕೊಡುವಾಗ, ಅಮೆರಿಕಾದ ರಾಜಕೀಯ ಉದ್ದೇಶವನ್ನು ವಿವರಿಸಿದರು. "ದಕ್ಷಿಣ ಏಷ್ಯಾವು ಪ್ರಜಾಪ್ರಭುತ್ವದಲ್ಲಿ ನಂಬಿಕೆಯುಳ್ಳ ವಿಶಾಲ ಏಷ್ಯಾ ಖಂಡದ ಹೃದಯದಂತಿದೆ. ಕಮ್ಯುನಿಸ್ಟ್ ಪದ್ಧತಿ ವಿರುದ್ಧ ನಡೆಯುವ ಹೋರಾಟದಲ್ಲಿ ಇಂಡಿಯಾ ಪ್ರಭಾವಶಾಲಿಯಾದ ಪಾತ್ರವಹಿಸಿ ಪ್ರಪಂಚದ ಎಲ್ಲಾ

[5] ಅಮೆರಿಕಾದ ವಿದೇಶಾಂಗ ಇಲಾಖೆ ಪ್ರಕಟಣೆ; ಜನವರಿ 27, 1964, ಪುಟ. 111

ಪ್ರಜಾಪ್ರಭುತ್ವ ರಾಷ್ಟ್ರಗಳ ಹಿತಾಸಕ್ತಿಗಳನ್ನು ಏಷ್ಯಾದಲ್ಲಿ ಕಾಪಾಡುವಂತಾಗಬೇಕು. ಈ ಹೋರಾಟದಲ್ಲಿ ನಾವು ಇಂಡಿಯಾಕ್ಕೆ ಸಹಾಯ ನೀಡಿ ಅದರ ಮೂಲಕ ಏಷ್ಯಾದಲ್ಲಿ ಶಕ್ತಿಬಣಗಳ ಮಧ್ಯೆ ಸಮತೋಲನ ನೀತಿ ಸ್ಥಾಪಿತವಾಗುವಂತೆ ಮಾಡಬೇಕು."[6]

ವಿದೇಶಾಂಗ ಕಾರ್ಯದರ್ಶಿ ರಸ್ಕ್‌ರವರು 1966ರಲ್ಲಿ ಆಹಾರ ಧಾನ್ಯಗಳ ಸರಬರಾಜಿಗೆ ಸಂಬಂಧಪಟ್ಟ ಕಾನೂನನ್ನು ಅಮೆರಿಕಾದ ಶಾಸನ ಸಭೆಗಳ ಮುಂದೆ ಮಂಡಿಸುತ್ತಾ ಹೀಗೆಂದರು: "ಶಾಂತಿಯನ್ನು ಕಾಪಾಡುವುದಕ್ಕೋಸ್ಕರ ನಾವು ಪರದೇಶಗಳಿಗೆ ಆಹಾರ ಧಾನ್ಯಗಳನ್ನು ಸರಬರಾಜು ಮಾಡಿ ಅಲ್ಲಿ ಪ್ರಜಾಪ್ರಭುತ್ವದಲ್ಲಿ ನಂಬಿಕೆಯುಳ್ಳ ಸರ್ಕಾರಗಳು ಅಧಿಕಾರದಲ್ಲಿ ಉಳಿಯುವಂತೆ ಮಾಡಿದ್ದೇವೆ. ಈ ನಮ್ಮ ಯೋಜನೆಯು ಇಂಡಿಯಾದಲ್ಲಿ ಬಹುಮಟ್ಟಿಗೆ ಜಯಪ್ರದವಾಗಿದೆ. ಅನೇಕ ವಿದೇಶೀಯ ರಾಜನೀತಿ ಧೋರಣೆಗಳ ವಿಷಯದಲ್ಲಿ ನಮ್ಮ ಅಭಿಪ್ರಾಯಕ್ಕೂ ಇಂಡಿಯಾದ ಅಭಿಪ್ರಾಯಕ್ಕೂ ಹೊಂದಾಣಿಕೆ ಇರುವುದಿಲ್ಲ. ಆದರೂ ನಾವು ಇಂಡಿಯಾ ದೇಶವು ಪ್ರಜಾಪ್ರಭುತ್ವ ತತ್ವಗಳಲ್ಲಿ ಇಟ್ಟುಕೊಂಡಿರುವ ಧ್ಯೇಯವನ್ನು ನೋಡಿ ಮೆಚ್ಚಿಕೊಂಡಿದ್ದೇವೆ. ಜೊತೆಗೆ ಕಮ್ಯುನಿಸ್ಟ್ ಧಾಳಿಯ ವಿರುದ್ಧ ಹೋರಾಡಲು ಇಂಡಿಯಾಕ್ಕೆ ಇರುವ ದೃಢಮನಸ್ಸನ್ನು ಅರಿತು ನಾವು ಅದಕ್ಕೆ ಆಹಾರ

[6] ಅಮೆರಿಕಾದ ವಿದೇಶಾಂಗ ಇಲಾಖೆ ಪ್ರಕಟಣೆ, ಏಪ್ರಿಲ್ 25, 1966, ಪುಟ 669-670.

ಧಾನ್ಯಗಳನ್ನು ಒದಗಿಸುವುದರ ಮೂಲಕ ನೆರವು ನೀಡುತ್ತಿದ್ದೇವೆ." [7]

ಮೇಲ್ಕಂಡ ಹೇಳಿಕೆಗಳನ್ನು ಪರಿಶೀಲಿಸುವುದರಿಂದ ನಾವು ಅಮೆರಿಕಾದ ರಾಜಕೀಯ ಉದ್ದೇಶಗಳು ಹೀಗಿವೆ ಎಂದು ಹೇಳಬಹುದು: (1) ದಕ್ಷಿಣ ಏಷ್ಯಾವಲ್ಲಿ ಕಮ್ಯುನಿಸ್ಟ್ ಪ್ರಭಾವ ಹರಡದಂತೆ ನೋಡಿಕೊಳ್ಳಲು ಇಂಡಿಯಾವನ್ನು ಶಕ್ತಿಗೊಳಿಸುವುದು; (2) ಏಷ್ಯಾದಲ್ಲಿ ಶಕ್ತಿಬಣಗಳ ಮಧ್ಯೆ ಸಮತೋಲನವನ್ನು ಕಾಪಾಡಿಕೊಂಡು ಹೋಗುವಂತೆ ನೋಡಿಕೊಳ್ಳುವುದು; (3) ಇಂಡಿಯಾದಲ್ಲಿ ಪ್ರಜಾಪ್ರಭುತ್ವ ಪದ್ಧತಿ ಯಶಸ್ವಿಯಾಗಿ ಬೆಳೆದು ಉಳಿಯಲು ಸಹಾಯಮಾಡುವುದು.

**ಆರ್ಥಿಕ ಉದ್ದೇಶಗಳು:**

ಅಧ್ಯಕ್ಷ ಐಸೆನ್ ಹೋವೆರ್‌ರವರು 1958 ರಲ್ಲಿ ಇಂಡಿಯಾಕ್ಕೆ ನೆರವು ಕೊಡುವ ವಿಷಯದಲ್ಲಿ ತಮ್ಮ ಅಭಿಪ್ರಾಯ ಸೂಚಿಸುತ್ತಾ ಹೀಗೆ ಹೇಳಿದ್ದಾರೆ.

ಹಿಂದುಳಿದ ರಾಷ್ಟ್ರಗಳಿಗೆ ನಾವು ನೆರವು ಕೊಡುವಾಗ ಆರ್ಥಿಕ ಉದ್ದೇಶವನ್ನೂ ಇಟ್ಟುಕೊಂಡಿದ್ದೇವೆ. ಇನ್ನು ಕೆಲವು ವರ್ಷಗಳಲ್ಲಿ ಹಿಂದುಳಿದ ರಾಷ್ಟ್ರಗಳು ಅಭಿವೃದ್ಧಿಯಾಗುತ್ತ ಹೋದ ಹಾಗೆಲ್ಲಾ ಅವುಗಳಿಂದ ನಮಗೆ ಪ್ರಯೋಜನವಾಗುತ್ತದೆ. ಅವು ನಮ್ಮ ರಫ್ತು ವ್ಯಾಪಾ

---

[7] ಇದೇ ಸಂದರ್ಭದಲ್ಲಿ; ಮಾರ್ಚ್ 28. 1966, ಪುಟ 497-498.

ರಕ್ಷಿ ಮೂರುಕಟ್ಟಿ ಒದಗಿಸುತ್ತವೆ. ನಮಗೆ ಬೇಕಾದ ಅವಶ್ಯಕ ವಸ್ತುಗಳನ್ನು ಒದಗಿಸುವ ಶಕ್ತಿ ಪಡೆಯುತ್ತವೆ. ನಮ್ಮ ದೇಶದ ಜನರಿಗೆ ಆ ದೇಶಗಳಲ್ಲಿ ಬಂಡವಾಳಹೂಡಿ ವ್ಯಾಪಾರ ಅಭಿವೃದ್ಧಿ ಮಾಡಲು ಅವಕಾಶ ಮಾಡಿ ಕೊಡುತ್ತವೆ. ಆದುದರಿಂದ ಅವುಗಳಿಗೆ ನೆರವು ನೀಡುವುದು ಒಳ್ಳೆಯದು.[8]

ಕೆನಡಿಯವರು ಅಧ್ಯಕ್ಷರಾದ ಮೇಲೆ ಅಮೆರಿಕಾದ ವಿದೇಶೀ ಧೋರಣೆಯಲ್ಲಿ ಒಂದು ದೊಡ್ಡ ಬದಲಾವಣೆ ಆಯಿತು. ಬಡದೇಶಗಳಿಗೆ ನೆರವುನೀಡಿ ಅವುಗಳ ಆರ್ಥಿಕ ಅಭಿವೃದ್ಧಿಗೆ ಸಹಾಯ ಮಾಡಬೇಕೆಂದು ಕೆನಡಿಯವರು ದೃಢ ಮನಸ್ಸು ಮಾಡಿದರು. ಆದುದರಿಂದ ಅವರು 1960–70ರ ಅವಧಿಯನ್ನು ಅಭಿವೃದ್ಧಿಯ ದಶಕವೆಂದು ಕರೆದರು. ಕಮ್ಯುನಿಸ್ಟ ಧೋರಣೆಯ ವಿರುದ್ಧ ಹೋರಾಡುವುದಕ್ಕೆ ಮಾತ್ರ ಅಮೆರಿಕಾದ ಆರ್ಥಿಕ ನೆರವು ಸೀಮಿತಗೊಳ್ಳದೆ ಹಿಂದುಳಿದ ರಾಷ್ಟ್ರಗಳು ಆರ್ಥಿಕವಾಗಿ ಬೆಳೆಯು ವುದಕ್ಕೆ ಸಹಾಯಕಾರಿಯಾಗಿರಬೇಕೆಂದು ಘೋಷಿಸಿದರು. ಅಭಿವೃದ್ಧಿ ಹೊಂದಿರುವ ದೇಶಗಳು ಹಿಂದುಳಿದ ದೇಶ ಗಳಿಗೆ ಈ ದಿಶೆಯಲ್ಲಿ ಸಹಾಯಮಾಡಲು ಒಳ್ಳೆಯ ಅವಕಾಶ ದೊರೆತಿದೆ. ಇದನ್ನು ಸದುಪಯೋಗಪಡಿಸಿ

---

[8] ಅಮೆರಿಕಾದ ವಿದೇಶಾಂಗ ಇಲಾಖೆ ಪ್ರಕಟಣೆ ; ಮಾರ್ಚ 10 1958 ; ಪುಟ 369

ಕೊಂಡು ಹಿಂದುಳಿದ ರಾಷ್ಟ್ರಗಳಲ್ಲಿ ಪ್ರಜಾಪ್ರಭುತ್ವ ಪದ್ಧತಿಯೊಂದಿಗೆ ಆರ್ಥಿಕ ಅಭಿವೃದ್ಧಿ ಕೂಡ ಸಾಧಿಸಲ್ಪಡಬಹುದು ಎಂಬುದನ್ನು ಜಗತ್ತಿಗೆ ತೋರಿಸಿಕೊಡಬೇಕೆಂದು ಅವರು ಕರೆಯಿತ್ತರು. ಇಂಡಿಯಾದಲ್ಲಿ ಪ್ರಜಾಪ್ರಭುತ್ವ ಪದ್ಧತಿ ಉಳಿಯಬೇಕಾದರೆ ಅದರ ಆರ್ಥಿಕ ಪ್ರಗತಿ ಅತ್ಯವಶ್ಯಕ. ಆದುದರಿಂದ ಅದಕ್ಕೆ ನಾವು ನೆರವು ನೀಡಬೇಕು ಎಂದರು.[೯]

ಅಂತರರಾಷ್ಟ್ರೀಯ ಆರ್ಥಿಕ ಮತ್ತು ಸಾಮಾಜಿಕ ವ್ಯವಹಾರಗಳ ಕಚೇರಿಯ ಮುಖ್ಯಸ್ಥರಾದ ವಾಲ್ಟರ್ ಕೋಸಿಂಗ್‌ರವರು ವಾಷಿಂಗ್‌ಟನ್ ನಗರದಲ್ಲಿ ಭಾಷಣ ಮಾಡುತ್ತಾ ಅಮೆರಿಕಾದ ಉದ್ದೇಶವನ್ನು ವಿವರಿಸಿದ್ದಾರೆ: "ಯಾವ ಅಂಜಿಕೆಯೂ ಇಲ್ಲದೆ ಅಮೆರಿಕವು ಪ್ರಪಂಚದಲ್ಲಿ ಮೊದಲನೆ ರಾಷ್ಟ್ರವಾಗಿ ಹಿಂದುಳಿದ ರಾಷ್ಟ್ರಗಳಿಗೆ ನೆರವು ನೀಡಲು ಆರಂಭಿಸಿತು. ಈ ರೀತಿ ಸಹಾಯಮಾಡಿವರೆ ನಮಗೇ ಒಳ್ಳೆಯದು ಎಂಬ ಭಾವನೆಯಿಂದ ಮಾಡುತ್ತಿದ್ದೇವೆ. ನಮ್ಮ ದೇಶದ ವಸ್ತುಗಳಿಗೆ ಹೊಸ ಮಾರುಕಟ್ಟೆಗಳು ದೊರೆಯುವುದಲ್ಲದೆ ನಮ್ಮ ಕೈಗಾರಿಕೆಗಳಿಗೆ ಅತ್ಯವಶ್ಯಕವಾದ ಕಚ್ಚಾವಸ್ತುಗಳೂ ಕೂಡ ಸುಲಭವಾಗಿ ಅಭಿವೃದ್ಧಿ ಹೊಂದುವ ದೇಶಗಳಿಂದ ದೊರೆತು ನಮ್ಮ ಆರ್ಥಿಕ ಬೆಳವಣಿಗೆಗೆ ಸಹಾಯವಾಗುತ್ತದೆ ಎಂಬ

---

[೯] ಅಮೆರಿಕಾದ ವಿದೇಶಾಂಗ ಇಲಾಖೆ ಪ್ರಕಟಣೆ ; ಏಪ್ರಿಲ್ 10, 1961 ; ಪುಟ 507–514.

ನಂಬಿಕೆ ಇಟ್ಟುಕೊಂಡಿದ್ದೇವೆ ಎಂದು ವಿವರಿಸಿದ್ದಾರೆ."[10]

ಮೇಲ್ಕಂಡ ಹೇಳಿಕೆಗಳಿಂದ ಅಮೆರಿಕಾದ ಆರ್ಥಿಕ ಉದ್ದೇಶಗಳು ಈ ಕೆಳಗೆ ಕಂಡಂತೆ ಇವೆ ಎಂದು ಹೇಳಬಹುದು : (1) ಅಮೆರಿಕಾದ ರಫ್ತುಗಳಿಗೆ ವಿಶಾಲವಾದ ಮಾರುಕಟ್ಟೆ ದೊರಕಿಸಿಕೊಳ್ಳುವುದು ; (2) ಅವಶ್ಯಕವಾದ ಕಚ್ಚಾವಸ್ತುಗಳನ್ನು ಅಧಿಕ ಪ್ರಮಾಣದಲ್ಲಿ ದೊರಕಿಸಿಕೊಳ್ಳುವುದು ; (3) ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಅಮೆರಿಕನ್ ವ್ಯಾಪಾರಗಾರರಿಗೆ ಮತ್ತು ಕೈಗಾರಿಕೋದ್ಯಮಿಗಳಿಗೆ ತಮ್ಮ ಬಂಡವಾಳ ಹೂಡಿ ವ್ಯವಹಾರ ಹೆಚ್ಚಿಸಿಕೊಳ್ಳಲು ಅವಕಾಶ ಮಾಡಿಕೊಡುವುದು.

ಆರ್ಥಿಕ ನೆರವು ನೀಡಿದರೆ ಇಂಡಿಯಾ ದೇಶವು ಕ್ರಮೇಣ ಆರ್ಥಿಕ ಪ್ರಗತಿ ಸಾಧಿಸುತ್ತದೆ. ಆರ್ಥಿಕ ಪ್ರಗತಿ ಹೆಚ್ಚಾದಂತೆಲ್ಲಾ ಇಂಡಿಯಾ ದೇಶದ ಜನರ ವರಮಾನ ಹೆಚ್ಚಾಗುತ್ತದೆ. ಅವರ ವರಮಾನ ಹೆಚ್ಚಿದಂತೆ ಅವರುಗಳು ಹೆಚ್ಚು ವಸ್ತುಗಳನ್ನು ಕೊಳ್ಳಲು ಯತ್ನಿಸುತ್ತಾರೆ. ಆದರೆ ಇಂಡಿಯಾ ದೇಶದಲ್ಲಿ ಇನ್ನೂ ಕೆಲವು ವರ್ಷಗಳ ತನಕ ಜನರ ಬೇಡಿಕೆಗೆ ಅನುಗುಣವಾಗಿ ವಸ್ತುಗಳ ಉತ್ಪನ್ನವನ್ನು ಹೆಚ್ಚಿಸಲಾಗುವುದಿಲ್ಲ. ಆದುದರಿಂದ ಇಂಡಿಯಾ ದೇಶವು ಅಮೆರಿಕಾ ಮತ್ತು

---

10 ಮೇಲ್ಕಂಡ ಪ್ರಕಟಣೆ ; ಫೆಬ್ರವರಿ 24, 1953 ; ಪುಟ 305.

ಇತರ ದೇಶಗಳಿಂದ ವಸ್ತುಗಳನ್ನು ಕೊಂಡುಕೊಳ್ಳ ಬೇಕಾಗುತ್ತದೆ. ಇದರಿಂದ ಅಮೆರಿಕಾ ಮತ್ತು ಇಂಡಿಯಾ ದೇಶಗಳ ಮಧ್ಯೆ ವ್ಯಾಪಾರ ಅಭಿವೃದ್ಧಿ ಯಾಗುತ್ತದೆ. ಅನೇಕ ವರ್ಷಗಳವರೆಗೆ ಇಂಡಿಯಾ ದೇಶ ತನಗೆ ಬೇಕಾದ ಯಂತ್ರಗಳು ಮುಂತಾದ ಬಂಡವಾಳ ವಸ್ತುಗಳನ್ನು ಅಮೆರಿಕಾದಿಂದ ಕೊಳ್ಳಬೇಕಾಗುತ್ತದೆ. ಇಂಡಿಯಾದ ಜನಸಂಖ್ಯೆಯೂ ಕೂಡ ಏರುತ್ತಿರುವುದ ರಿಂದ ಸಾಕಷ್ಟು ಮಾರುಕಟ್ಟೆಯನ್ನು ಇಂಡಿಯಾ ದೇಶ ಒದಗಿಸುತ್ತದೆ. ಆದುದರಿಂದ ಅಮೆರಿಕಾವ ರಫ್ತು ವ್ಯಾಪಾರಕ್ಕೆ ಇಂಡಿಯಾ ದೇಶ ಆಕರ್ಷಣೆಯಾದ ಮಾರುಕಟ್ಟೆಯಾಗಿರುತ್ತದೆ. ಹೀಗೆ ಇಂಡಿಯಾಕ್ಕೆ ನೆರವು ನೀಡುವುದರ ಮೂಲಕ ಅಮೆರಿಕಾ ವಿಶಾಲವಾದ ಮಾರುಕಟ್ಟೆ ಸೌಲಭ್ಯ ಪಡೆಯುವ ಉದ್ದೇಶ ಹೊಂದಿದೆ.

ಅಮೆರಿಕಾದ ವಿಸ್ತೀರ್ಣ ಮತ್ತು ಜನಸಂಖ್ಯೆಯನ್ನು ಗಮನಕ್ಕೆ ತೆಗೆದುಕೊಂಡು ಅದು ಉಪಯೋಗಿಸುವ ಕಚ್ಚಾವಸ್ತುಗಳನ್ನು ಪರಿಶೀಲಿಸಿದರೆ ಪ್ರಪಂಚದಲ್ಲಿ ಉತ್ಪತ್ತಿಯಾಗುವ ಒಟ್ಟು ಕಚ್ಚಾವಸ್ತುಗಳ ಬಹು ಪಾಲನ್ನು ಅಮೆರಿಕಾ ಒಂದೇ ಉಪಯೋಗಿಸಿಕೊಳ್ಳು ತ್ತದೆ ಎಂದು ಹೇಳಬಹುದು. 1961ರಲ್ಲಿ ಮಾಡಿರುವ ಅಂದಾಜಿನ ಪ್ರಕಾರ ಪ್ರಪಂಚದ ವಿಸ್ತೀರ್ಣದಲ್ಲಿ ಶೇಕಡ 7 ರಷ್ಟನ್ನು ಮತ್ತು ಜನಸಂಖ್ಯೆಯಲ್ಲಿ ಶೇಕಡ 7 ರಷ್ಟನ್ನು ಅಮೆರಿಕಾ ಹೊಂದಿತ್ತು ಎಂದು ಹೇಳ ಬಹುದು. ಆದರೆ ಕೈಗಾರಿಕಾ ವಸ್ತು ಉತ್ಪನ್ನಗಳ

ವಿಷಯದಲ್ಲಿ ಪ್ರಪಂಚದ ವಾರ್ಷಿಕ ಉತ್ಪಾದನೆಯನ್ನು ಪರಿಶೀಲಿಸಿದರೆ ಅಮೇರಿಕಾ ಒಂದರಲ್ಲೇ ಸುಮಾರು ಅರ್ಧದಷ್ಟು ಉತ್ಪತ್ತಿಯಾಗುತ್ತಿತ್ತು ಎಂದು ಹೇಳ ಬಹುದು. ಹದಿನೈದು ಪ್ರಮುಖ ಖನಿಜಗಳ ಉತ್ಪಾದನೆ ಯನ್ನು ಗಮನಕ್ಕೆ ತೆಗೆದುಕೊಂಡರೆ ಪ್ರಪಂಚದ ಒಟ್ಟು ಉತ್ಪಾದನೆಯಲ್ಲಿ ಮೂರರಲ್ಲಿ ಒಂದು ಭಾಗ ($\frac{1}{3}$) ಮಾತ್ರ ಅಮೆರಿಕಾದಲ್ಲಿ ಆಗುತ್ತಿತ್ತು ಎಂದು ತಿಳಿದು ಬರುತ್ತದೆ ಆದುದರಿಂದ ಅಮೆರಿಕಾವು ತನ್ನ ಕೈಗಾರಿಕೆ ಗಳಿಗೆ ಬೇಕಾದ ಕಚ್ಚಾ ಸಾಮಗ್ರಿಗಳನ್ನು ಪಡೆಯಲು ಬಹುಮಟ್ಟಿಗೆ ಹಿಂದುಳಿದ ದೇಶಗಳನ್ನು ಅವಲಂಬಿಸ ಬೇಕಾಗಿದೆ.[11] ಅಮೆರಿಕಾವು ಇಂಡಿಯಾದಿಂದ ಆಮದು ಮಾಡಿಕೊಳ್ಳುವ ವಸ್ತುಗಳ ಮೌಲ್ಯ ಡಾಲರ್ ರೂಪದಲ್ಲಿ ಅತಿಯಾಗಿ ಕಾಣದಿದ್ದರೂ. ವಸ್ತುಗಳ ಪ್ರಾಮುಖ್ಯತೆಯ ದೃಷ್ಟಿಯಿಂದ ಅಮೆರಿಕಾಕ್ಕೆ ಇಂಡಿಯಾದ ವಸ್ತುಗಳು ಅತ್ಯವಶ್ಯಕ ಎಂದು ಪರಿಗಣಿಸಲ್ಪಟ್ಟಿದೆ. ಅಮೆರಿಕಾದ ಕೈಗಾರಿಕೆಗಳಿಗೆ ಅತ್ಯವಶ್ಯಕವಾದ ಸೆಣಬು, ಮ್ಯಾಂಗ ನೀಸ್ ಮತ್ತು ಅಭ್ರಕ ಸಾಕಷ್ಟು ಪ್ರಮಾಣದಲ್ಲಿ ಇಂಡಿಯಾದಿಂದ ಅಮೆರಿಕಾಕ್ಕೆ ಒದಗಿಸಲ್ಪಡುತ್ತದೆ. ಇಂಡಿಯಾದಿಂದ ಅಮೆರಿಕಾಕ್ಕೆ ಬರುವ ವಸ್ತುಗಳ ಪೈಕಿ

---

11 ಎಸ್. ಚಂದ್ರಶೇಖರ್: ಅಮೆರಿಕಾದ ಸಹಾಯ ಮತ್ತು ಇಂಡಿಯಾದ ಆರ್ಥಿಕ ಅಭಿವೃದ್ಧಿ; (ನ್ಯೂಯಾರ್ಕ್; ಫ್ರೇಗರ್ ಪುಸ್ತಕ ಮಾರಾಟಗಾರರು; 1965) ಪುಟ. 52

ಶೇಕಡಾ 65 ರಷ್ಟು ಅಮೆರಿಕದ ರಕ್ಷಣಾ ವ್ಯವಸ್ಥೆಗೆ ಅವಶ್ಯಕವೆಂದು 1948ರಲ್ಲಿ ಅಮೆರಿಕಾ ಸರ್ಕಾರ ನಿರ್ಧರಿಸಿದೆ.[12]

1965ರಲ್ಲಿ, ಅಮೆರಿಕಾದ ಕೈಗಾರಿಕಾಭಿವೃದ್ಧಿ ಮತ್ತು ಧನ ವಿನಿಯೋಗ ಮಂಡಳಿಯು ಇಂಡಿಯಾ ದೇಶಕ್ಕೆ ಬಂದು ಇಂಡಿಯಾ ದೇಶದ ವಿವಿಧ ಭಾಗಗಳಿಗೆ ಭೇಟಿ ಕೊಟ್ಟು ಇಲ್ಲಿಯ ವ್ಯಾಪಾರ ಸ್ಥಿತಿಯನ್ನು ಪರಿಶೀಲಿಸಿತು. ಅಮೆರಿಕಾದ ಆರ್ಥಿಕ ಸಹಾಯ, ಇಂಡಿಯಾವಲ್ಲಿ ಅಮೆರಿಕಾದ ವಸ್ತುಗಳಿಗೆ ಒಳ್ಳೆಯ ಮಾರುಕಟ್ಟೆಯನ್ನು ಒದಗಿಸಿಕೊಡಲು ಸಹಾಯಕವಾಗಿದೆ ಎಂದು ಅದು ಅಭಿಪ್ರಾಯಪಟ್ಟಿತು.[13] ಅಮೆರಿಕನರು ಹೆಚ್ಚಿಗೆ ಬಂಡವಾಳ ಹೂಡಿ ಇಂಡಿಯಾವಲ್ಲಿ ವ್ಯಾಪಾರ ಅಭಿವೃದ್ಧಿ ಮಾಡಲು ಅದು ಕರೆ ಕೊಟ್ಟಿದೆ. 1966ರ ವೇಳೆಗೆ ಅಮೆರಿಕಾದ ಖಾಸಗೀ ಕಂಪನಿಗಳು 253 ದಶಲಕ್ಷ ಡಾಲರ್ ಮೊತ್ತದಷ್ಟು ಬಂಡವಾಳವನ್ನು ಇಂಡಿಯಾದಲ್ಲಿ ವಿವಿಧ ಕ್ಷೇತ್ರಗಳಲ್ಲಿ ತೊಡಗಿಸಿದ್ದವೆಂದು ಅದು

---

12 ಎಲ್. ಕೆ. ರೋಸಿಂಗರ್: ಇಂಡಿಯಾ ಮತ್ತು ಅಮೆರಿಕಾದ ಸಂಯುಕ್ತಸಂಸ್ಥಾನಗಳು (ನ್ಯೂಯಾರ್ಕ್, ಮ್ಯಾಕ್‌ಮಿಲನ್ ಕಂಪನಿ, 1950, ಪುಟ. 68

13 ಅಂತರರಾಷ್ಟ್ರೀಯ ವಾಣಿಜ್ಯ: ವಿಶೇಷ ಪ್ರಕಟಣೆ– ಇಂಡಿಯಾ–ಒಂದು ಒಳ್ಳೆಯ ಮಾರುಕಟ್ಟೆ (ಅಮೆರಿಕಾದ ವಾಣಿಜ್ಯ ಇಲಾಖೆಯ ವಾರ ಪತ್ರಿಕೆ; ಏಪ್ರಿಲ್ 26, 1965) ಪು. 5

ಅಂದಾಜು ಮಾಡಿತು. ಸುಮಾರು 200 ವಿವಿಧ ಅಮೆ
ರಿಕನ್ ಕಂಪನಿಗಳು ವ್ಯವಹಾರ ನಡೆಸುತ್ತಿದ್ದು ಅವೆಲ್ಲವೂ
ಇಂಡಿಯಾದಲ್ಲಿ ಒಳ್ಳೆಯ ವಾತಾವರಣವಿದೆ ಎಂದು
ಅಭಿಪ್ರಾಯಪಟ್ಟಿವೆ. ಜೊತೆಗೆ ಅಮೆರಿಕದ ಕಂಪನಿಗಳು
ಇಂಡಿಯಾದಲ್ಲಿ ದೊರೆಯುವ ಸಾಲಗಳನ್ನು ಉಪಯೋಗಿಸಿ
ಕೊಂಡು ತಮ್ಮ ವ್ಯಾಪಾರವನ್ನು ವಿಸ್ತರಿಸುವಂತೆ ಈ
ಮಂಡಳಿಯು ಕರೆ ಕೊಟ್ಟಿದೆ.

ಅಮೆರಿಕಾವು ಇಂಡಿಯಾಕ್ಕೆ ಆಹಾರಧಾನ್ಯಗಳನ್ನು
ಒದಗಿಸಿದೆ. ಇವುಗಳನ್ನು ಮಾರಿ ಬಂದ ಹಣವನ್ನು
ರೂಪಾಯಿ ಮೌಲ್ಯದಲ್ಲಿ ಇಂಡಿಯಾದಲ್ಲೇ ಇಡಲಾಗು
ತ್ತದೆ. ಅಮೆರಿಕನ್ ಸರ್ಕಾರ ಮತ್ತು ಇಂಡಿಯಾ
ಸರ್ಕಾರಗಳ ನಡುವೆ ಈ ಹಣವನ್ನು ಬಳಸುವ ಬಗ್ಗೆ
ಒಂದು ಒಪ್ಪಂದವಾಗಿದೆ. ಒಟ್ಟು ಹಣದಲ್ಲಿ ಬಹುಭಾಗ
ವನ್ನು ಇಂಡಿಯಾ ಸರ್ಕಾರ ಸಾಲವಾಗಿ ಕೊಟ್ಟು ಅದನ್ನು
ಅಭಿವೃದ್ಧಿ ಕಾರ್ಯಗಳಿಗೆ ಉಪಯೋಗಿಸಿಕೊಳ್ಳುವಂತೆ
ತಿಳಿಸಲಾಗಿದೆ. ಸ್ವಲ್ಪ ಭಾಗ ಮಾತ್ರ ಅಮೆರಿಕಾ ರಾಯ
ಭಾರಿಯವರ ಹತೋಟಿಯಲ್ಲಿರುತ್ತದೆ. ರಾಯಭಾರಿ
ಯವರು ಈ ಹಣವನ್ನು ತಮ್ಮ ದೇಶದ ವ್ಯಾಪಾರಸ್ಥರಿಗೆ
ಸಾಲವಾಗಿ ಕೊಡಬಹುದು. ಅಮೆರಿಕಾದ ಕಂಪನಿಗಳು
ಇಂಡಿಯಾದೇಶದಲ್ಲಿ ಹೊಸದಾಗಿ ಉತ್ಪಾದನಾ ಕೇಂದ್ರ
ಗಳನ್ನು ಸ್ಥಾಪಿಸುವುದಾದರೆ ಅಥವಾ ಇಂಡಿಯಾದ ವರ್ತಕ
ರೊಡನೆ ಸೇರಿಕೊಂಡು ಇರುವ ಉತ್ಪಾದನಾ ಕೇಂದ್ರಗಳ
ಚಟುವಟಿಕೆಯನ್ನು ವಿಸ್ತರಿಸುವುದಾದರೆ ಆಗ ಅವರುಗಳಿಗೆ

ಅಮೆರಿಕಾದ ರಾಯಭಾರಿಯವರು ತಮ್ಮಲ್ಲಿರುವ ರೂಪಾಯಿ ನಿಧಿಯಿಂದ ಸಾಲ ಕೊಟ್ಟು ಪ್ರೋತ್ಸಾಹಿಸುತ್ತಾರೆ. ಈಗ ರಾಯಭಾರಿಯವರು ನೇರವಾಗಿ ಕೆಲವು ಇಂಡಿಯಾದ ಕಂಪನಿಗಳಿಗೆ ಧನ ಸಹಾಯ ಒದಗಿಸಬಹುದೆಂದು ಒಪ್ಪಂದ ಮಾಡಿಕೊಳ್ಳಲಾಗಿದೆ. ಹೀಗೆ ಅಮೆರಿಕದ ಆರ್ಥಿಕ ಸಹಾಯವು ಅಮೆರಿಕಾದ ವ್ಯಾಪಾರ ಅಭಿವೃದ್ಧಿಗೆ ಸಹಾಯ ಮಾಡುತ್ತಿದೆ.

**ಪರೋಪಕಾರ ದೃಷ್ಟಿ :**

ಆರ್ಥಿಕ ನೆರವು ಕೊಡುವಾಗ ರಾಜಕೀಯ ಮತ್ತು ಆರ್ಥಿಕ ಉದ್ದೇಶಗಳೊಂದಿಗೆ ಅಮೆರಿಕಾವು ಪರೋಪಕಾರ ದೃಷ್ಟಿಯನ್ನು ಹೊಂದಿದೆ. 1966 ರಲ್ಲಿ ಅಧ್ಯಕ್ಷ ಜಾನ್‌ಸನ್‌ರವರು ಅಮೆರಿಕಾದ ಶಾಸನ ಸಭೆಗಳಿಗೆ (ವಿದೇಶಿ ಸಹಾಯವನ್ನು ಕೊಡುವ ವಿಷಯದಲ್ಲಿ) ತಮ್ಮ ಸಂದೇಶವನ್ನು ಕಳುಹಿಸುತ್ತಾ ಹೀಗೆ ತಿಳಿಸಿದ್ದಾರೆ: "ಪ್ರಪಂಚದ ಬಹು ದೇಶಗಳ ಜನರು ಹಸಿವಿನಿಂದ ಬಳಲುತ್ತಿದ್ದಾರೆ. ಅಭಿವೃದ್ಧಿಹೊಂದುತ್ತಿರುವ ದೇಶಗಳ ಜನರಂತೂ ತಮ್ಮ ಬಡತನದ ವಿರುದ್ಧ ಹೋರಾಡುತ್ತಿದ್ದಾರೆ. ಅಮೆರಿಕಾದ ಐಶ್ವರ್ಯವನ್ನು ಈ ದೇಶಗಳಲ್ಲಿ ಕಂಡುಬರುವ ಹಸಿವು, ರೋಗಗಳು ಮತ್ತು ಅಜ್ಞಾನವನ್ನು ತೊಡೆದುಹಾಕಲು ಉಪಯೋಗಿಸಬೇಕು. ಇದಕ್ಕಾಗಿ 1966ರ ಅಂತರರಾಷ್ಟ್ರೀಯ ವಿದ್ಯಾಭ್ಯಾಸ ಮತ್ತು ಆರೋಗ್ಯ ಕಾನೂನುಗಳನ್ನು ಶಾಸನಸಭೆಗಳು ಅಂಗೀ

ಕರಿಸಬೇಕು ಎಂದರು. ಅಮೆರಿಕಾದ ಸಂಸ್ಕೃತಿ ಮತ್ತು ಪರೋಪಕಾರ ಮನೋಭಾವನೆಗೆ ತಕ್ಕ ಹಾಗೆ ನಾವು ನಡೆದುಕೊಂಡು ಬೇರೆ ದೇಶಗಳಿಗೆ ಸಹಾಯ ಮಾಡಬೇಕು. ಇಂತಹ ಉನ್ನತ ಪರಂಪರೆಯನ್ನು ನಮ್ಮ ದೇಶ ಬೆಳೆಸಿಕೊಂಡು ಬಂದಿದೆ. ಇದನ್ನು ಮುಂದು ವರಿಸಿಕೊಂಡು ಹೋಗುವುದು ನಮ್ಮ ಪರಮ ಕರ್ತವ್ಯ ಎಂದರು.[14]

ಪರೋಪಕಾರ ದೃಷ್ಟಿಯಿಂದಲೇ 1965–67 ರಲ್ಲಿ ಅಮೆರಿಕಾವು ಇಂಡಿಯಾದೇಶದ ನೆರವಿಗೆ ಬಂದಿತು. ಇಂಡಿಯಾ ಕ್ಷಾಮದ ಪರಿಸ್ಥಿತಿಯನ್ನು ಎದುರಿಸುತ್ತಿದ್ದಾಗ ಆಹಾರ ಧಾನ್ಯಗಳ ಸರಬರಾಜಿಗೆ ಅಮೇರಿಕಾವನ್ನು ಕೇಳಿಕೊಂಡಿತು. ಕೂಡಲೇ ಅಮೆರಿಕಾದ ಅಧ್ಯಕ್ಷ ಜಾನ್‌ಸನ್‌ರವರು ಇಂಡಿಯಾಕ್ಕೆ ಅಧಿಕ ಪ್ರಮಾಣದಲ್ಲಿ ಆಹಾರಧಾನ್ಯಗಳನ್ನು ಸಾಗಿಸಲು ಅಪ್ಪಣೆ ಇತ್ತರು. ಅಮೇರಿಕಾ ವಿಪುಲವಾದ ಗೋಧಿಯನ್ನು ಇಟ್ಟು ಕೊಂಡಿದ್ದು ಇಂಡಿಯಾದಲ್ಲಿ ಅನೇಕ ಜನರು ಹಸಿವಿನಿಂದ ನರಳುತ್ತಿರುವಾಗ ಸುಮ್ಮನೆ ಇರುವುದು ತಮ್ಮ ಮನೋಭಾವನೆಗೆ ವ್ಯತಿರಿಕ್ತವಾದುದು ಎಂದು ತಿಳಿಸಿ ಗೋಧಿ ಸರಬರಾಜಿಗೆ ಆಜ್ಞೆಮಾಡಿದರು.

---

14 ಅಮೆರಿಕಾದ ವಿದೇಶಾಂಗ ಇಲಾಖೆ ಪ್ರಕಟಣೆ; ಫೆಬ್ರವರಿ 28, ಪುಟ 320–340.

**ಆರ್ಥಿಕ ನೆರವನ್ನು ಅಮೆರಿಕಾದಿಂದ ಪಡೆಯುವಾಗ ಇಂಡಿಯಾ ದೇಶ ಇರಿಸಿಕೊಂಡಿರುವ ಉದ್ದೇಶಗಳು :**

ಅಮೆರಿಕಾ ಆರ್ಥಿಕ ನೆರವು ಕೊಡುವಾಗ ಕೆಲವು ದೃಷ್ಟಿಗಳನ್ನು ಇರಿಸಿಕೊಂಡಿರುವಂತೆಯೇ ಇಂಡಿಯಾ ದೇಶವೂ ಕೂಡ ಕೆಲವು ಉದ್ದೇಶಗಳನ್ನು ಇರಿಸಿಕೊಂಡು ನೆರವು ಪಡೆಯುತ್ತಿದೆ. ಇಂಡಿಯಾ ಕೂಡ ರಾಜಕೀಯ ಮತ್ತು ಆರ್ಥಿಕ ಉದ್ದೇಶಗಳನ್ನು ಇರಿಸಿಕೊಂಡಿದೆ.

ಇಂಡಿಯಾದ ಆರ್ಥಿಕಾಭಿವೃದ್ಧಿಯನ್ನು ಸಾಧಿಸುವುದ ಕ್ಕೋಸ್ಕರ ಅಮೆರಿಕಾದ ಆರ್ಥಿಕ ನೆರವನ್ನು ಪಡೆಯುವುದು ಇಂಡಿಯಾದ ಪ್ರಮುಖ ಉದ್ದೇಶ ವಾಗಿದೆ. ಆದರೆ ಈ ನೆರವು ಪಡೆಯುವುದಕ್ಕೋಸ್ಕರ ತನ್ನ ರಾಜಕೀಯ ಉದ್ದೇಶಗಳನ್ನು ತ್ಯಾಗ ಮಾಡಲು ಇಂಡಿಯಾ ಸಿದ್ಧವಾಗಿಲ್ಲ. ಇಂಡಿಯಾದ ಉದ್ದೇಶ ಗಳನ್ನು ಈ ಕೆಳಗೆ ಕಂಡಂತೆ ವಿಂಗಡಿಸಬಹುದು :

(1) ತಮ್ಮ ದೇಶದ ಸ್ವಾತಂತ್ರ್ಯವನ್ನು ಗಳಿಸಿ ಕೊಳ್ಳಲು ಸುಮಾರು 200 ವರ್ಷಗಳಕಾಲ ಇಂಡಿಯಾ ಜನರು ಬ್ರಿಟಿಷ್ ಸಾಮ್ರಾಜ್ಯದ ವಿರುದ್ಧ ಹೋರಾಡಿದರು. ಆದುದರಿಂದ ಈಗ ಇಂಡಿಯಾದ ಪ್ರಮುಖ ಕರ್ತವ್ಯ ವೇನೆಂದರೆ ಸ್ವಾತಂತ್ರ್ಯವನ್ನು ಕಾಪಾಡಿಕೊಂಡು ಹೋಗು ವುದು. ಸ್ವಾತಂತ್ರ್ಯವು ಉಳಿದುಕೊಂಡು ಹೋಗಬೇಕಾ ದರೆ ಬೇರಾವ ರಾಷ್ಟ್ರವು ತಮ್ಮ ದೇಶದ ರಾಜಕೀಯ ವ್ಯವ ಹಾರಗಳಲ್ಲಿ ಪ್ರವೇಶಿಸಬಾರದೆಂದು ಇಂಡಿಯಾದ ಜನರ

ಅಭಿಮತ. ಆರ್ಥಿಕ ನೆರವಿನ ಸೋಗಿನಲ್ಲಿ ಅಮೆರಿಕಾವು ಇಂಡಿಯಾದ ರಾಜಕೀಯ ವ್ಯವಹಾರಗಳಲ್ಲಿ ಪ್ರವೇಶಿಸ ಬಾರದೆಂದು ಬಹುಪಾಲು ಇಂಡಿಯಾದ ಜನರ ಅಭಿಪ್ರಾಯ. ಈ ಮರತ್ತನ್ನು ಸೂಚಿಸಿ, ಅಮೆರಿಕಾದಿಂದ ನೆರವು ಪಡೆಯಲು ಇಂಡಿಯಾ ಒಪ್ಪಿಕೊಂಡಿದೆ.

(2) ಇಂಡಿಯಾವು ಅಂತರರಾಷ್ಟ್ರೀಯ ರಾಜಕೀಯ ವ್ಯವಹಾರಗಳಲ್ಲಿ ತಟಸ್ಥ ನೀತಿಯನ್ನು ಅನುಸರಿಸಲು ಬದ್ಧವಾಗಿದೆ. ವಿವಿಧ ಶಕ್ತಿಬಣಗಳ ಮಧ್ಯೆ ಇಂಡಿಯಾವು ತನ್ನದೇ ಆದ ರೀತಿಯಲ್ಲಿ ಸ್ವತಂತ್ರ ಧೋರಣೆಯನ್ನು ಪಾಲಿಸಿಕೊಂಡು ಹೋಗಲು ಯತ್ನಿಸುತ್ತದೆ. ಆದುದರಿಂದ ತನ್ನ ಅಭಿವೃದ್ಧಿಗಾಗಿ ಯಾವ ದೇಶದಿಂದ ಬೇಕಾದರೂ ಆರ್ಥಿಕ ನೆರವು ಪಡೆಯಲು ಇಂಡಿಯಾ ಉದ್ದೇಶಿಸಿದೆ. ಇದೇ ರೀತಿ ಪಡೆಯುತ್ತಲೂ ಇದೆ. ಅನೇಕ ಸಂದರ್ಭಗಳಲ್ಲಿ ಇಂಡಿಯಾದ ತಟಸ್ಥ ನೀತಿಯು ಪಾಶ್ಚಿಮಾತ್ಯ ರಾಷ್ಟ್ರಗಳಿಗೂ ತೃಪ್ತಿಯುಂಟುಮಾಡಿಲ್ಲ. ಕಮ್ಯುನಿಸ್ಟ್ ರಾಷ್ಟ್ರಗಳಿಗಂತೂ ಅನೇಕಸಲ ಇಂಡಿಯಾದ ನೀತಿಯು ಕೋಪವನ್ನುಂಟುಮಾಡಿದೆ. ಆದರೂ ತನ್ನ ಸ್ವಹಿತದೃಷ್ಟಿಯಿಂದ ಇಂಡಿಯಾ ತನ್ನ ಸ್ವತಂತ್ರ ಧೋರಣೆಯನ್ನು ಮುಂದುವರಿಸಿಕೊಂಡು ಹೋಗುತ್ತಿದೆ. ಅಮೆರಿಕಾವು ಇದಕ್ಕೆ ಅಡ್ಡಿ ಬರಬಾರದೆಂದು ಇಂಡಿಯಾದ ಅಭಿಪ್ರಾಯ.

(3) ಅನೇಕವರ್ಷಗಳ ಸಂಸ್ಕೃತಿಯ ಪರಿಣಾಮವಾಗಿ ಇಂಡಿಯಾದಲ್ಲಿ ವ್ಯಕ್ತಿಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವ

ಪದ್ಧತಿಗೆ ಹೆಚ್ಚಿನ ಪ್ರೋತ್ಸಾಹ ದೊರೆತಿದೆ. ಆದುದರಿಂದ ರಾಜಕೀಯ ಜಾಗೃತಿ ಪಡೆದಿರುವ ಅನೇಕ ಇಂಡಿಯಾದ ಜನರು ಸೈದ್ಧಾಂತಿಕವಾಗಿ ಪಾಶ್ಚಿಮಾತ್ಯ ರಾಷ್ಟ್ರಗಳ ಪ್ರಜಾಪ್ರಭುತ್ವ ಪದ್ಧತಿಯ ಕಡೆಗೆ ಬೆಂಬಲ ಸೂಚಿಸಿದ್ದಾರೆ. ಅವರುಗಳು ಕಮ್ಯುನಿಸ್ಟ್ ಪದ್ಧತಿಯ ನಿರಂಕುಶ ಪದ್ಧತಿಯ ವಿರುದ್ಧ ತಮ್ಮ ಅಭಿಪ್ರಾಯ ಸೂಚಿಸಿದ್ದಾರೆ. ಆದುದರಿಂದ ಅನೇಕರು ಇಂಡಿಯಾದಲ್ಲಿ ಪ್ರಜಾಪ್ರಭುತ್ವ ಪದ್ಧತಿ ಉಳಿಸಿಕೊಂಡು ಹೋಗುವ ಸಂಕಲ್ಪ ಮಾಡಿದ್ದಾರೆ. ಈ ರೀತಿಯಾದ ಅಭಿಪ್ರಾಯ ಹೊಂದಿದ್ದರೂ ಅಮೆರಿಕಾದ ಎಲ್ಲ ನೀತಿಗಳನ್ನು ಇವರು ಸಮರ್ಥಿಸಲು ಸಿದ್ಧರಾಗಿಲ್ಲ.

(4) ಅಮೆರಿಕಾವು ತನ್ನ ಆರ್ಥಿಕ ಧೋರಣೆಯಲ್ಲಿ ಖಾಸಗೀ ವಲಯಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿದೆ. ಇಂಡಿಯಾದಲ್ಲಿ ಬಹಳಮಂದಿ ಖಾಸಗೀ ವಲಯಕ್ಕೆ ತಮ್ಮ ಬೆಂಬಲ ಸೂಚಿಸಿದರೂ ದೇಶದ ಹಿತದೃಷ್ಟಿಯಿಂದ ಸಂಪೂರ್ಣವಾಗಿ ಖಾಸಗೀ ವಲಯದ ಪಾತ್ರವನ್ನು ಇಂಡಿಯಾದ ಆರ್ಥಿಕ ಚಟುವಟಿಕೆಗಳಲ್ಲಿ ಒಪ್ಪಿಕೊಳ್ಳುವುದಿಲ್ಲ. ನಮ್ಮ ದೇಶವು ಹಿಂದುಳಿದ ದೇಶವಾಗಿರುವುದರಿಂದ ಆರ್ಥಿಕ ಧೋರಣೆ ರೂಪಿಸುವುದರಲ್ಲಿ ಸರ್ಕಾರವು ಪ್ರಮುಖ ಪಾತ್ರ ವಹಿಸಬೇಕೆಂಬುದು ಅನೇಕರ ಅಭಿಮತ. ಅದಕ್ಕೋಸ್ಕರವಾಗಿಯೇ ಪ್ರಸಿದ್ಧ ಕೈಗಾರಿಕೋದ್ಯಮಿಗಳು ಮತ್ತು ಅರ್ಥಶಾಸ್ತ್ರಜ್ಞರಿಂದ ಹಿಡಿದು ಸಾಮಾನ್ಯ ಪ್ರಜೆಯವರೆಗೂ, ಅನೇಕ ಜನರು ಇಂಡಿಯಾದ

ಆರ್ಥಿಕ ಯೋಜನೆಗಳ ಮೂಲಕ ಅಭಿವೃದ್ಧಿ ಸಾಧಿಸಲು ಸರ್ಕಾರಕ್ಕೆ ಬೆಂಬಲವಿತ್ತಿದ್ದಾರೆ. ಯೋಜನೆಯನ್ನು ಆಚರಣೆಗೆ ತರುತ್ತಿರುವ ವಿಷಯದಲ್ಲಿ ವಿವಿಧ ವರ್ಗದ ಜನರ ನಡುವೆ ಇಂಡಿಯಾದಲ್ಲಿ ಭಿನ್ನಾಭಿಪ್ರಾಯವಿದೆ. ಆದರೂ ಸರ್ಕಾರವು ಆರ್ಥಿಕ ಚಟುವಟಿಕೆಗಳಲ್ಲಿ ಹೆಚ್ಚಾಗಿ ಭಾಗವಹಿಸಿ ಇಂಡಿಯಾದ ಅಭಿವೃದ್ಧಿ ಸಾಧಿಸಬೇಕೆಂಬುದರ ಪರ ಜನರ ಒಟ್ಟಾರೆ ಅಭಿಪ್ರಾಯವಿದೆ. ಆದುದರಿಂದ ಇಂಡಿಯಾದ ಜನರು ಆರ್ಥಿಕ ವ್ಯವಹಾರಗಳಲ್ಲಿ ಹೆಚ್ಚಾಗಿ ಸರ್ಕಾರದ ಪಾತ್ರಕ್ಕೆ ಪ್ರೋತ್ಸಾಹ ಕೊಟ್ಟರೂ ಅಮೆರಿಕವು ಇದಕ್ಕೆ ಆಕ್ಷೇಪಿಸಕೂಡದೆಂಬುದು ಇಂಡಿಯಾದ ಧೋರಣೆ.

ಅಮೆರಿಕಾದೇಶ ಮತ್ತು ಇಂಡಿಯಾದೇಶದ ಉದ್ದೇಶಗಳನ್ನು ಪರಿಶೀಲಿಸಿದಾಗ ಒಂದು ಪ್ರಮುಖ ವಿಷಯ ಎದ್ದು ಕಾಣುತ್ತದೆ. ಅನೇಕ ವಿಷಯಗಳಲ್ಲಿ ಎರಡು ರಾಷ್ಟ್ರಗಳು ಏಕಾಭಿಪ್ರಾಯ ಹೊಂದಿಲ್ಲದಿದ್ದರೂ, ಎರಡು ರಾಷ್ಟ್ರಗಳು ಇಂಡಿಯಾದ ಆರ್ಥಿಕ ಅಭಿವೃದ್ಧಿ ವಿಷಯದಲ್ಲಿ ಒಂದೇ ರೀತಿಯ ನಿಲುವನ್ನು ತಾಳಿವೆ. ಈ ಕೆಳಗೆ ಕಂಡ ವಿಷಯಗಳಲ್ಲಿ ಎರಡು ರಾಷ್ಟ್ರಗಳು ಒಂದೇ ರೀತಿಯ ದೃಷ್ಟಿಯನ್ನು ಇರಿಸಿಕೊಂಡಿವೆ: (1) ಇಂಡಿಯಾವನ್ನು ಆರ್ಥಿಕವಾಗಿ ಅಭಿವೃದ್ಧಿಗೊಳಿಸುವುದರಲ್ಲಿ; (2) ದಕ್ಷಿಣ ಏಷ್ಯಾದಲ್ಲಿ ಕಮ್ಯುನಿಸ್ಟ ಪ್ರಭಾವ ಹರಡದಂತೆ ನೋಡಿಕೊಳ್ಳುವುದರಲ್ಲಿ; ಮತ್ತು (3) ಇಂಡಿಯಾದಲ್ಲಿ ಪ್ರಜಾಪ್ರಭುತ್ವ ಪದ್ಧತಿಯನ್ನು ಉಳಿಸಿಕೊಂಡು, ಬೆಳೆಯಿಸಿಕೊಂಡು ಹೋಗುವುದರಲ್ಲಿ.

ಆದುದರಿಂದ ಎಷ್ಟರಮಟ್ಟಿಗೆ ಅಮೆರಿಕಾದ ಆರ್ಥಿಕ ನೆರವು ಇಂಡಿಯಾದ ಗುರಿಗಳನ್ನು ಸಾಧಿಸುವುದರಲ್ಲಿ ಸಹಾಯವಾಗಿದೆ ಎಂಬುದನ್ನು ಚರ್ಚಿಸುವಾಗ ನಾವು ಮೇಲ್ಕಂಡ ದೃಷ್ಟಿಗಳನ್ನು ಗಮನದಲ್ಲಿ ಇರಿಸಿಕೊಳ್ಳಬೇಕು. ಎಲ್ಲಾ ವಿಷಯಗಳಲ್ಲೂ ಎರಡು ರಾಷ್ಟ್ರಗಳ ದೃಷ್ಟಿಕೋನ ಒಂದೇ ರೀತಿ ಇರುವುದು ಸಾಧ್ಯವಿಲ್ಲ. ಎರಡೂ ಪರಮಾಧಿಕಾರವುಳ್ಳ ಸ್ವತಂತ್ರ ರಾಷ್ಟ್ರಗಳಾದುದರಿಂದ ತಮ್ಮ ಹಿತಾಸಕ್ತಿಗಳಿಗೆ ಅನುಗುಣವಾದ ತಮ್ಮ ಉದ್ದೇಶಗಳನ್ನು ಇರಿಸಿಕೊಳ್ಳುವುದು ಪ್ರತಿಯೊಂದು ರಾಷ್ಟ್ರದ ಹಕ್ಕು. ಆದರೆ ಇಂಡಿಯದ ಆರ್ಥಿಕ ಅಭಿವೃದ್ಧಿ ಸಾಧಿಸುವುದರಲ್ಲಿ ಎಷ್ಟರಮಟ್ಟಿಗೆ ಎರಡು ರಾಷ್ಟ್ರಗಳ ಉದ್ದೇಶಗಳು ನೆರವೇರಿಸಲ್ಪಟ್ಟಿವೆ ಎಂಬುವನ್ನು ತಿಳಿದುಕೊಳ್ಳುವುದು ನಮ್ಮ ಮುಖ್ಯ ಗುರಿಯಾಗಿರಬೇಕು. ಈ ವಿಷಯವನ್ನು ಕುರಿತು ಮುಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ.

## ೩. ಇಂಡಿಯಾಕ್ಕೆ ಅಮೆರಿಕಾವು ಒದಗಿಸಿರುವ ಆರ್ಥಿಕ ಸಹಾಯದ ಮುಖ್ಯಾಂಶಗಳು

ಅಮೆರಿಕಾವು 1951ರಲ್ಲಿ ಗೋಧಿಯನ್ನು ಕೊಳ್ಳಲು 142.28 ಕೋಟಿ ರೂಪಾಯಿ ಸಾಲವನ್ನು ಇಂಡಿಯಾಕ್ಕೆ ಕೊಡುವುದರ ಮೂಲಕ ತನ್ನ ಆರ್ಥಿಕ ಸಹಾಯವನ್ನು ಮೊದಲ ಬಾರಿಗೆ ಪ್ರಾರಂಭಿಸಿತು. ಇಂಡಿಯಾದಲ್ಲಿ ಆಹಾರ ಧಾನ್ಯದ ಕೊರತೆ 1948-50ರಲ್ಲಿ ವಿಪರೀತ ವಾಗಿದ್ದಿತು. ಆಗ ಇಂಡಿಯಾದೇಶ ಆಹಾರಧಾನ್ಯ ಆಮದು ಮಾಡಿಕೊಂಡು ದೇಶದಲ್ಲಿದ್ದ ತೊಂದರೆಯನ್ನು ನಿವಾರಿಸಿಕೊಳ್ಳಬೇಕಾಗಿತ್ತು. ಆದರೆ ಆಮದು ಮಾಡಿ ಕೊಳ್ಳಲು ಇಂಡಿಯಾದೇಶದ ಹತ್ತಿರ ಸಾಕಷ್ಟು ವಿದೇಶಿ ವಿನಿಮಯವಿರಲಿಲ್ಲ. ಆದುದರಿಂದ ಇಂತಹ ಪರಿಸ್ಥಿತಿಯಲ್ಲಿ ಅಮೆರಿಕಾ ಸರ್ಕಾರ ಮುಂದೆ ಬಂದು ಸಾಲಕೊಡಲು ಒಪ್ಪಿಕೊಂಡಿತು. ಈ ಸಾಲದಿಂದ ಗೋಧಿಯನ್ನು ಆಮದು ಮಾಡಿಕೊಳ್ಳಲು ಸಹಾಯವಾಯಿತು. ಹೀಗೆ ಅಮೆರಿಕಾ ಮತ್ತು ಇಂಡಿಯಾ ದೇಶಗಳ ನಡುವೆ ಮೊದಲಬಾರಿಗೆ ಆರ್ಥಿಕ ನೆರವು ಪ್ರಾರಂಭವಾಯಿತು. ಕ್ರಮೇಣ ಇಂಡಿಯಾದೇಶದ ಅವಶ್ಯಕತೆಗಳಿಗೆ ತಕ್ಕಹಾಗೆ ಮತ್ತು ಅಮೆರಿಕಾದ ಆಡಳಿತ ವ್ಯವಸ್ಥೆಯ ಬದಲಾವಣೆಗೆ ಅನು ಗುಣವಾಗಿ ಕಳೆದ 20 ವರ್ಷಗಳಲ್ಲಿ (1951–1970) ಆರ್ಥಿಕ ನೆರವಿನ ಸ್ವರೂಪವೂ ಬದಲಾವಣೆಯಾಗಿದೆ. ಈಗ ಇಂಡಿಯಾದೇಶದ ವಿವಿಧ ಅಭಿವೃದ್ಧಿ ಕಾರ್ಯಕ್ರಮ

ಗಳಿಗೆ ಅನುಕೂಲವಾಗುವಂತೆ ವ್ಯಾಪಕವಾದ ಆರ್ಥಿಕ ನೆರವಿನ ಯೋಜನೆಯು ಜಾರಿಯಲ್ಲಿದೆ.

1951 ರಿಂದ 1957ರ ವರೆಗೆ "ಇಂಡೋ-ಅಮೆರಿಕಾ" ಯೋಜನೆ ಮೇರೆಗೆ ಇಂಡಿಯಾಕ್ಕೆ ನೆರವು ನೀಡಲಾಗುತ್ತಿತ್ತು. ಇಂಡಿಯಾದಲ್ಲಿ ತಾಂತ್ರಿಕ ಸಹಕಾರ ಮಂಡಳಿಯನ್ನು (Technical Co-operation Mission) ಸ್ಥಾಪಿಸಿ ಅದರ ಮೂಲಕ ಇಂಡಿಯಾಕ್ಕೆ ಕೊಡುವ ಆರ್ಥಿಕ ನೆರವಿನ ಕಾರ್ಯಕ್ರಮಗಳನ್ನು ನಿರ್ಧರಿಸಲಾಗುತ್ತಿತ್ತು. ಮುಖ್ಯವಾಗಿ ಇಂಡಿಯಾದೇಶಕ್ಕೆ ತಾಂತ್ರಿಕ ಸಹಾಯ ಒದಗಿಸಿ ಇಂಡಿಯಾದ ಅಭಿವೃದ್ಧಿ ಕಾರ್ಯಕ್ರಮಗಳು ಯಶಸ್ವಿಯಾಗುವಂತೆ ಮಾಡುವುದು ಇದರ ಉದ್ದೇಶವಾಗಿತ್ತು. ಈ ಯೋಜನೆಯು 3 ವಿಧಗಳಲ್ಲಿ ಕಾರ್ಯಗತವಾಯಿತು.

(1) ಅಭಿವೃದ್ಧಿ ಯೋಜನೆಗಳನ್ನು ಇಂಡಿಯಾ ಪ್ರಾರಂಭಿಸಿದಾಗ ಅಲ್ಲಿಗೆ ಅಮೆರಿಕನ್ ಸರ್ಕಾರದ ವೆಚ್ಚದಲ್ಲಿ ಅಮೆರಿಕನ್ ತಜ್ಞರನ್ನು ಕಳುಹಿಸಿ ಇಂಡಿಯಾದ ಜನರೊಂದಿಗೆ ಅವರು ಕೆಲಸಮಾಡುವಂತೆ ಮಾಡಿ ತಾಂತ್ರಿಕ ಜ್ಞಾನವನ್ನು ಒದಗಿಸಿಕೊಡುವುದು; (2) ಅಮೆರಿಕಾ ಅಥವಾ ಇತರ ದೇಶಗಳಿಗೆ ಅಮೆರಿಕಾದ ಖರ್ಚಿನಲ್ಲಿ ಇಂಡಿಯಾದ ಅಧಿಕಾರಿಗಳನ್ನು ಕಳುಹಿಸಿ ಅವರು ತಾಂತ್ರಿಕ ತರಬೇತಿ ಪಡೆಯುವಂತೆ ಮಾಡುವುದು; (3) ಇಂಡಿಯಾ ದೇಶದಲ್ಲಿ ವಿವಿಧ ಸಂಸ್ಥೆಗಳಿಗೆ ನವೀನ ಉಪಕರಣಗಳನ್ನು ಮತ್ತು ಪಠ್ಯಪುಸ್ತಕಗಳನ್ನು ಒದಗಿಸಿ ಅವು

ಗಳು ಉನ್ನತ ಮಟ್ಟದಲ್ಲಿ ತಾಂತ್ರಿಕ ತರಬೇತಿ ಒದಗಿಸು ವಂತೆ ಮಾಡುವುದು.

1957ರಲ್ಲಿ P. L. 480 ಯೋಜನೆ ಪ್ರಕಾರ ಇಂಡಿಯಾಕ್ಕೆ ಆಹಾರಧಾನ್ಯಗಳ ಸರಬರಾಜು ಆರಂಭ ವಾಯಿತು. ಈ ಒಪ್ಪಂದದ ಪ್ರಕಾರ ಆಗಿಂದಾಗ ಅಮೆರಿಕಾ ಇಂಡಿಯಾಕ್ಕೆ ಅವಶ್ಯಕವಾದ ಆಹಾರ ಧಾನ್ಯ ಗಳನ್ನು ಮತ್ತು ಕಚ್ಚಾ ಸಾಮಗ್ರಿಗಳನ್ನು ಒದಗಿಸುತ್ತದೆ. ಅಮೆರಿಕಾ ಸರ್ಕಾರ ಒದಗಿಸಿದ ಆಹಾರ ಸಾಮಗ್ರಿಗಳು ಮತ್ತು ಕಚ್ಚಾವಸ್ತುಗಳ ಡಾಲರ್ ಬೆಲೆಗೆ ಸಮನಾಗಿ ಇಂಡಿಯಾ ಸರ್ಕಾರ ರೂಪಾಯಿ ಮೌಲ್ಯದಲ್ಲಿ ಅಮೆರಿ ಕಾಕ್ಕೆ ಪಾವತಿ ಮಾಡುತ್ತದೆ. ಇಂಡಿಯಾದ ರಿಸರ್ವ್ ಬ್ಯಾಂಕಿನಲ್ಲಿ ಅಮೆರಿಕಾ ಸರ್ಕಾರದ ಖಾತೆ ಇದೆ. ಆ ಖಾತೆಗೆ ಇಂಡಿಯಾ ಸರ್ಕಾರ ಕೊಡಬೇಕಾದ ಹಣವನ್ನು (ರೂಪಾಯಿ ಮೌಲ್ಯದಲ್ಲಿ) ಕಟ್ಟಲಾಗುತ್ತದೆ.

ಹೀಗೆ ಅಮೆರಿಕಾ ಸರ್ಕಾರದ ಖಾತೆಯಲ್ಲಿ ಇಟ್ಟಿರುವ ಹಣವನ್ನು ವಿನಿಯೋಗ ಮಾಡುವ ವಿಷಯದಲ್ಲೂ ಅಮೆರಿಕ ಮತ್ತು ಇಂಡಿಯಾ ಸರ್ಕಾರಗಳ ನಡುವೆ ಒಪ್ಪಂದವಾಗಿದೆ. ಈ ಹಣದ ಶೇಕಡಾ 80.4 ಭಾಗವನ್ನು ಅಮೆರಿಕಾ ಸರ್ಕಾರ ಇಂಡಿಯಾದ ಆರ್ಥಿಕ ಅಭಿವೃದ್ಧಿ ಯೋಜನೆ ಗಳಿಗೆ ಕೊಡಬೇಕೆಂದು ತೀರ್ಮಾನಿಸಲಾಗಿದೆ. (ಶೇಕಡ 19.7 ಭಾಗವನ್ನು ದಾನದ ರೂಪದಲ್ಲೂ ಮತ್ತು ಶೇಕಡಾ 60.7 ಭಾಗವನ್ನು ಸಾಲದ ರೂಪದಲ್ಲೂ ಕೊಡಬೇಕೆಂದು ಅಮೆರಿಕಾ ಸರ್ಕಾರ ನಿರ್ಧರಿಸಿದೆ) ಉಳಿದುದರಲ್ಲಿ ಶೇಕಡಾ

13.1 ಭಾಗವನ್ನು ಅಮೆರಿಕಾ ಸರ್ಕಾರವು ತನ್ನ ರಾಯ ಭಾರಿಯ ಹತೋಟಿಯಲ್ಲಿಟ್ಟುಕೊಂಡಿರುತ್ತದೆ. ಇಂಡಿಯಾ ದೇಶದಲ್ಲಿ ಅಮೆರಿಕಾ ಸರ್ಕಾರದ ಪರವಾಗಿ ಮಾಡಬೇಕಾ ಗಿರುವ ವೆಚ್ಚಗಳನ್ನು ಈ ಹಣದಿಂದ ಮಾಡಲಾಗುತ್ತದೆ. ಉಳಿದ ಶೇಕಡಾ 6.5 ಭಾಗ ಹಣವನ್ನು ಇಂಡಿಯಾ ದಲ್ಲಿರುವ ಖಾಸಗೀ ವ್ಯಾಪಾರಿ ಮತ್ತು ಕೈಗಾರಿಕಾ ಸಂಸ್ಥೆ ಗಳಿಗೆ ಅವುಗಳ ಅಭಿವೃದ್ಧಿ ಸಾಧಿಸಲು ಸಾಲ ಕೊಡಲಾಗು ತ್ತದೆ.

ಆಹಾರ ಧಾನ್ಯಗಳ ಸರಬರಾಜಿನಿಂದ ಬಂದ ಹಣವನ್ನು ಇಂಡಿಯಾದಲ್ಲೇ ಇಟ್ಟುಕೊಂಡು, ಅದನ್ನು ಅಭಿವೃದ್ಧಿ ಕಾರ್ಯಗಳಿಗಾಗಿ ವಿನಿಯೋಗಿಸುವುದರಿಂದ, ಇದನ್ನು "ಅಭಿವೃದ್ಧಿ ಸಾಲದ ನಿಧಿ" (Development loan Fund) ಎಂದು ಕರೆಯಲಾಯಿತು.

1961ರಲ್ಲಿ ವ್ಯಾಪಕವಾದ ಆರ್ಥಿಕ ನೆರವಿನ ಯೋಜನೆಯನ್ನು ಜಾರಿಗೆ ತರಲು ಅಮೆರಿಕಾದ ಅಂತರ ರಾಷ್ಟ್ರೀಯ ಅಭಿವೃದ್ಧಿ ನಿಯೋಗವನ್ನು (United States Agency for International Development) ಸ್ಥಾಪಿಸಲಾಯಿತು. ಈಗ ಈ ನಿಯೋಗವು ಇಂಡಿಯಾಕ್ಕೆ ನೀಡುವ ಆರ್ಥಿಕ ಸಹಾಯದ ಸಂಪೂರ್ಣ ಕಾರ್ಯಕ್ರಮಗಳನ್ನು ನಿರ್ದೇಶಿಸುತ್ತದೆ. ಈ ನಿಯೋಗವು ಪ್ರತಿವರ್ಷ ಇಂಡಿಯಾಕ್ಕೆ ಕೊಡುವ ನೆರವಿನಲ್ಲಿ ಎಷ್ಟು ಸಾಲದ ರೂಪದಲ್ಲಿರಬೇಕು ಮತ್ತು ಎಷ್ಟು ದಾನದ ರೂಪದಲ್ಲಿರಬೇಕು ಎಂಬುದನ್ನು ನಿರ್ಧರಿಸುತ್ತದೆ.

ಅಭಿವೃದ್ಧಿ ಕಾರ್ಯಕ್ರಮಗಳಿಗಾಗಿ ಕೊಡುವ ಸಾಲಗಳನ್ನು 40 ವರ್ಷಗಳ ಅವಧಿಯವರೆಗೂ ಕೊಡಲಾಗುತ್ತಿದೆ. ಸಾಲ ತೆಗೆದುಕೊಂಡ ಮೇಲೆ ಮೊದಲ 10 ವರ್ಷಗಳವರೆಗೆ ಶೇಕಡಾ 1 ರಂತೆ ಬಡ್ಡಿ ಕೊಡಬೇಕು. ಉಳಿದ 30 ವರ್ಷಗಳಿಗೆ ಶೇಕಡ 2½ಯಂತೆ ಬಡ್ಡಿ ಕೊಡಬೇಕು. ಇಂಡಿಯಾ ಸರ್ಕಾರಕ್ಕೆ ಸಾಲ ಕೊಡುವುದಲ್ಲದೆ ಕೆಲವು ಪ್ರಮುಖ ಖಾಸಗೀ ಸಂಸ್ಥೆಗಳಿಗೂ ಮತ್ತು ಸ್ವಯಂ ಆಡಳಿತ ಸಂಸ್ಥೆಗಳಿಗೂ ಕೊಡಲಾಗಿದೆ. 36ನೇ ಪುಟದಲ್ಲಿ ಕೊಟ್ಟಿರುವ ಪಟ್ಟಿಯಿಂದ ವಿವಿಧ ರೂಪಗಳಲ್ಲಿ ಅಮೆರಿಕಾ ದೇಶವು ಇಂಡಿಯಾಕ್ಕೆ ಕೊಟ್ಟಿರುವ ಆರ್ಥಿಕ ನೆರವು ತಿಳಿದುಬರುತ್ತದೆ.

ಆ ಪಟ್ಟಿಯಿಂದ ತಿಳಿದುಬರುವುದೇನೆಂದರೆ ಜುಲೈ 1969ರ ಪೂರ್ತಾ ನಮ್ಮ ದೇಶಕ್ಕೆ ವಿವಿಧ ರೂಪಗಳಲ್ಲಿ ಅಮೆರಿಕಾ ಸರ್ಕಾರವು 902.76 ಕೋಟಿ ಡಾಲರ್ ಮೊತ್ತದ (6770·70 ಕೋಟಿ ರೂ.ಮೊತ್ತದ) ಆರ್ಥಿಕ ನೆರವನ್ನು ನೀಡಿದೆ.

ಇಂಡಿಯಾ ದೇಶದ ಅಭಿವೃದ್ಧಿ ಕಾರ್ಯಗಳಲ್ಲಿ ತಾಂತ್ರಿಕ ಜ್ಞಾನ ಒದಗಿಸುವುದರ ಮೂಲಕ ಅಮೆರಿಕಾ ಸಾಕಷ್ಟು ಸಹಾಯ ಮಾಡಿದೆ. 1951 ರಿಂದ 1969ರವರೆಗೆ 2771 ಅಮೆರಿಕನ್ ತಜ್ಞರು ಇಂಡಿಯಾದ ವಿವಿಧ ಭಾಗಗಳಲ್ಲಿ ಕೆಲಸಮಾಡಿ ದೇಶದ ಅಭಿವೃದ್ಧಿ ಕಾರ್ಯಗಳನ್ನು ಯಶಸ್ವಿಯಾಗಿ ಪೂರೈಸಲು ಸಹಾಯ

[37ನೇ ಪುಟಕ್ಕೆ ಮುಂದುವರೆದಿದೆ

ಪಟ್ಟಿ 2

ಜೂನ್ 1951 ರಿಂದ ಜುಲೈ 1969 ರ ಪೂರ್ತಾ ಕೊಟ್ಟಿರುವ ಆರ್ಥಿಕ ನೆರವು

| | ದಶಲಕ್ಷ ಡಾಲರುಗಳಲ್ಲಿ | ಒಟ್ಟು ನೆರವಿನ ಶೇಕಡಾವಾರು |
|---|---|---|
| 1. ಸಹಾಯ ದ್ರವ್ಯ (grants) (ವಾಪಸ್ಸು ಕೊಡಬೇಕಾಗಿಲ್ಲ) | 1762.0 | 19.5 |
| 2. ಡಾಲರ್ ರೂಪದಲ್ಲಿ ವಾಪಸ್ಸು ಕೊಡಬೇಕಾದ ಸಾಲಗಳು | 2988.7 | 33.1 |
| 3. ರೂಪಾಯಿ ಅಥವಾ ಡಾಲರ್ ಮೌಲ್ಯದಲ್ಲಿ ವಾಪಸ್ಸು ಕೊಡಬೇಕಾದ ಸಾಲಗಳು (ಅಮೆರಿಕಾ ಸರ್ಕಾರದ ಇಷ್ಟಕ್ಕನುಸಾರವಾಗಿ) | 197.3 | 2.1 |
| 4. ರೂಪಾಯಿ ಮೌಲ್ಯದಲ್ಲಿ ಕೊಡಬೇಕಾದ ಸಾಲಗಳು | 4079.6 | 45.3 |
| ಒಟ್ಟು | 9027.6 | 100.0 |

ಆಧಾರ : ಅಮೆರಿಕಾ ವಾರ್ತಾ ಕಛೇರಿಯ ಪ್ರಕಟಣೆ ; ಸೆಪ್ಟೆಂಬರ್ 1970 (ದೆಹಲಿ).

ಮಾಡಿದ್ದಾರೆ. ಇಂಡಿಯಾ ಸರ್ಕಾರದ ಕೋರಿಕೆ ಮೇರೆಗೆ ಕೃಷಿ ವಿಜ್ಞಾನ, ಇಂಜಿನಿಯರಿಂಗ್ ವಿದ್ಯಾಭ್ಯಾಸ, ಕುಟುಂಬ ಯೋಜನೆ, ಗಣಿ ಅಭಿವೃದ್ಧಿ ಮತ್ತು ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟುವುದರಲ್ಲಿ ಅನುಭವ ಪಡೆದವರು, ವಿವಿಧ ವಿಜ್ಞಾನಗಳಲ್ಲಿ ಪ್ರವೀಣತೆಯನ್ನು ಹೊಂದಿರುವವರು ಮತ್ತು ವಿವಿಧ ವಿದ್ಯಾಸಂಸ್ಥೆಗಳಲ್ಲಿ ಕೆಲಸ ಮಾಡಬಲ್ಲ ಸಾಮರ್ಥ್ಯವುಳ್ಳ ವಿದ್ವಾಂಸರು ಇಂಡಿಯಾಕ್ಕೆ ಬಂದು ಕೆಲಸ ಮಾಡಿದ್ದಾರೆ.

ಇದೇ ರೀತಿ ಇಂಡಿಯಾದಿಂದ ಸರ್ಕಾರಿ ಅಧಿಕಾರಿಗಳು, ಇಂಜನಿಯರುಗಳು, ಉಪಾಧ್ಯಾಯರುಗಳು, ಆರೋಗ್ಯ ಇಲಾಖೆಯ ಪ್ರಮುಖರು ಅಮೆರಿಕಾ ಮತ್ತು ಇತರ ದೇಶಗಳಿಗೆ ಅಮೆರಿಕಾದ ವೆಚ್ಚದಲ್ಲಿ ಹೋಗಿ ತರಬೇತಿ ಪಡೆದು ಬಂದಿದ್ದಾರೆ. ಇವರ ಒಟ್ಟು ಸಂಖ್ಯೆ 5381.

ಮುಂದಿನ ಅಧ್ಯಾಯಗಳಲ್ಲಿ ಅಮೆರಿಕದ ಆರ್ಥಿಕ ನೆರವು ಎಷ್ಟರಮಟ್ಟಿಗೆ ಇಂಡಿಯಾದ ವಿವಿಧ ಆರ್ಥಿಕ ಕಾರ್ಯಕ್ರಮಗಳ ಮೇಲೆ ತನ್ನ ಪ್ರಭಾವ ಬೀರಿದೆ ಎಂಬುದನ್ನು ತಿಳಿದುಕೊಳ್ಳೋಣ.

## ೪. ಇಂಡಿಯಾದ ವ್ಯವಸಾಯಾಭಿವೃದ್ಧಿಗೆ ಅಮೆರಿಕಾ ಒದಗಿಸಿರುವ ನೆರವು

ಅನೇಕ ಹಿಂದುಳಿದ ದೇಶಗಳಲ್ಲಿರುವಂತೆ ಇಂಡಿಯಾದಲ್ಲೂ ವ್ಯವಸಾಯದ ಉತ್ಪನ್ನವನ್ನು ಹೆಚ್ಚಿಸುವುದು ಪ್ರಮುಖ ಸಮಸ್ಯೆಯಾಗಿದೆ. ಇಂಡಿಯಾದಲ್ಲಿ ಹೊಸದಾಗಿ ಭೂಮಿಯನ್ನು ವ್ಯವಸಾಯಕ್ಕೆ ಅಳವಡಿಸುವುದು ಸಾಧ್ಯವಿಲ್ಲ. ಏಕೆಂದರೆ ವ್ಯವಸಾಯಕ್ಕೆ ಯೋಗ್ಯವಾಗಿರುವಂತಹ ಭೂಮಿಯನ್ನೆಲ್ಲಾ ಆದಷ್ಟು ಉಪಯೋಗಿಸಿಕೊಳ್ಳಲಾಗಿದೆ. ಆದುದರಿಂದ ಪ್ರತಿ ಭೂಮಿಯಿಂದಲೂ ಅಧಿಕ ಉತ್ಪನ್ನ ಪಡೆದು ಅಭಿವೃದ್ಧಿ ಸಾಧಿಸುವುದೇ ನಮ್ಮ ಮುಂದಿರುವ ಏಕೈಕ ಗುರಿ.

ನಾವು ಎದುರಿಸುತ್ತಿರುವ ಪ್ರಮುಖ ಸಮಸ್ಯೆಯೆಂದರೆ ನಮ್ಮ ಜನಸಂಖ್ಯೆಯ ಬೆಳವಣಿಗೆ. ಆಹಾರ ಉತ್ಪನ್ನದಲ್ಲಿ ಆಗುತ್ತಿರುವ ಪ್ರಗತಿಗಿಂತಲೂ ಅಧಿಕವಾಗಿ ಜನಸಂಖ್ಯೆ ಏರುತ್ತಿದೆ. ನಮ್ಮ ದೇಶವಲ್ಲಿ ಜನಸಂಖ್ಯೆ 1961 ರಿಂದ ಈಚೆಗೆ ವರ್ಷಕ್ಕೆ ಶೇಕಡ 2.5 ರಷ್ಟು ಹೆಚ್ಚಾಗುತ್ತಿದೆ. ಇದರ ಪರಿಣಾಮವಾಗಿ ಆಹಾರ ಧಾನ್ಯಗಳಿಗೆ ಬೇಡಿಕೆ ಹೆಚ್ಚಾಗುತ್ತಿದೆ.

ಅಮೆರಿಕಾದ ವ್ಯವಸಾಯದ ಇಲಾಖೆಯು ಇಂಡಿಯಾದಲ್ಲಿ ಆಹಾರ ಧಾನ್ಯಗಳ ಬೇಡಿಕೆಯನ್ನು ಕುರಿತು ಒಂದು ಅಧ್ಯಯನ ನಡೆಸಿದೆ. 1950-60ರ ಅವಧಿಯಲ್ಲಿ ಆಹಾರ ಧಾನ್ಯಗಳಿಗೆ ಬೇಡಿಕೆ ಸುಮಾರಾಗಿ ಶೇಕಡ 3.36 ರಷ್ಟು

ಏರಿತು. ಇದರ ಪೈಕಿ ಶೇಕಡ 2 ರಷ್ಟು ಬೇಡಿಕೆ ಜನ ಸಂಖ್ಯೆಯ ಏರಿಕೆಯ ಪರಿಣಾಮವಾಗಿ ಉಂಟಾಗಿದೆ. ಉಳಿದ ಶೇಕಡ 1.36 ರಷ್ಟು ಬೇಡಿಕೆಯು ಇಂಡಿಯಾದಲ್ಲಿ ಉಂಟಾದ ಅಧಿಕ ತಲಾ ವರಮಾನದ ಫಲವಾಗಿ ಆಗಿದೆ ಎಂದು ಆ ಅಧ್ಯಯನದಿಂದ ತಿಳಿದುಬಂದಿದೆ.[15]

ಹೀಗೆ ಆಹಾರಧಾನ್ಯಗಳಿಗೆ ಒಂದೇ ಸಮನೆ ಬೇಡಿಕೆ ಏರುತ್ತಿರುವಾಗ, ಅವುಗಳ ಉತ್ಪನ್ನ ನಿಧಾನವಾಗಿ ಅಧಿಕಗೊಳ್ಳುತ್ತಿದೆ. 1950-51 ರಲ್ಲಿ ಆಹಾರಧಾನ್ಯಗಳ ಉತ್ಪನ್ನ 54.9 ದಶಲಕ್ಷ ಟನ್‌ಗಳು ಇದ್ದುದು 1965-66 ರಲ್ಲಿ 72.3 ದಶಲಕ್ಷ ಟನ್‌ಗಳಿಗೆ ಏರಿತು. ಅಂದರೆ ವರ್ಷಕ್ಕೆ ಶೇಕಡ 2 ರಷ್ಟಕ್ಕಿಂತಲೂ ಸ್ವಲ್ಪ ಕಡಿಮೆ ದರದಲ್ಲಿ ಆಹಾರಧಾನ್ಯಗಳ ಉತ್ಪನ್ನ ಏರಿದೆ. ಆದುದರಿಂದ ಆಹಾರಧಾನ್ಯಗಳಿಗೆ ಇರುವ ಬೇಡಿಕೆ ಅವುಗಳ ಉತ್ಪನ್ನಕ್ಕಿಂತಲೂ ಅಧಿಕವಾಗಿರುವುದೇ ನಮಗೆ ಸಮಸ್ಯೆಯನ್ನು ತಂದೊಡ್ಡಿದೆ.

ಅಮೆರಿಕಾದ ಸರ್ಕಾರ, 1948-63ರ ಅವಧಿಯಲ್ಲಿ ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಯಾವ ರೀತಿ ವ್ಯವಸಾಯದ ಕ್ಷೇತ್ರದಲ್ಲಿ ಬದಲಾವಣೆಯಾಗಿದೆ ಎಂಬು

---

[15] ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ವ್ಯವಸಾಯ-ಅಮೆರಿಕಾ ಸರ್ಕಾರದ ಅಧ್ಯಯನದಿಂದ ಕಂಡುಬಂದ ಕೆಲವು ಅಂಶಗಳು "ಕಾಮರ್ಸ್ ನಿಯತಕಾಲಿಕೆ" (ಬೊಂಬಾಯಿ, ಜೂನ್ 25 1966) ಪು. 1124; ಪಟ್ಟಿ I.

ದರ ಬಗ್ಗೆ ಒಂದು ಅಧ್ಯಯನ ನಡೆಸಿದೆ. ಮುಂದಿನ ಪಟ್ಟಿ ಯಲ್ಲಿ ಅದು ನಡೆಸಿದ ಅಧ್ಯಯನದ ಮುಖ್ಯಾಂಶಗಳು ಕಂಡುಬರುತ್ತವೆ. ಅಭಿವೃದ್ಧಿ ಹೊಂದುತ್ತಿರುವ ದೇಶ ಗಳನ್ನು 2 ಗುಂಪಾಗಿ ವಿಂಗಡಿಸಿದೆ. ಆ ದೇಶಗಳಲ್ಲಿ 1950-60ರ ಅವಧಿಯಲ್ಲಿ ಇದ್ದ ಕೆಲವು ಮುಖ್ಯಾಂಶ ಗಳನ್ನು ಗಣನೆಯಲ್ಲಿಟ್ಟುಕೊಂಡು ಯಾವ ರೀತಿ ವ್ಯವ ಸಾಯದಲ್ಲಿ ಪ್ರಗತಿ ಆಗಿದೆ ಎಂಬುದನ್ನು ಪಟ್ಟಿಯು ತೋರಿಸುತ್ತದೆ. (ಪಟ್ಟಿಯನ್ನು ಮುಂದಿನ ಪುಟದಲ್ಲಿ ಕೊಡಲಾಗಿದೆ.

ಅಭಿವೃದ್ಧಿ ಹೊಂದುತ್ತಿರುವ ದೇಶಗಳೊಡನೆ ಇಂಡಿ ಯಾದ ವ್ಯವಸಾಯದ ಸ್ಥಿತಿಯನ್ನು ಹೋಲಿಸಿ ನೋಡಿ ದರೆ ಪ್ರತಿ ಹೆಕ್ಟಾರಿನಿಂದ ಬರುತ್ತಿರುವ ಉತ್ಪನ್ನ ಬಹಳ ಕೆಳಮಟ್ಟದಲ್ಲಿದೆ ಎಂಬುದು ಪಟ್ಟಿಯಿಂದ ಕಂಡುಬರು ತ್ತದೆ. ಅಮೆರಿಕಾ ಸರ್ಕಾರದ ಅಧ್ಯಯನವು ಇಂಡಿಯಾ ದೇಶದ ಆಹಾರ ಸಮಸ್ಯೆ ಕುರಿತು ಈ ಕೆಳಕಂಡ ತೀರ್ಮಾ ನಕ್ಕೆ ಬಂದಿದೆ. “ ಈಗ ಇಂಡಿಯಾದಲ್ಲಿ ದೊರೆಯುತ್ತಿರುವ ಆಹಾರಧಾನ್ಯಗಳನ್ನು ಪ್ರತಿ ಮನುಷ್ಯನಿಗೂ 2300 ಕ್ಯಾಲರಿಗಳಷ್ಟು ಆಹಾರ ದೊರೆಯುವಂತೆ ಹಂಚಿದರೆ 48 ಕೋಟಿ ಜನರ ಪೈಕಿ 4·8 ಕೋಟಿ ಜನರಿಗೆ ಆಹಾರ ದೊರೆಯುವುದಿಲ್ಲ. ಅಮೆರಿಕಾದಲ್ಲಿ ಜನರು ಆಹಾರ ಉಪ ಯೋಗಿಸುವಂತೆ ಪ್ರತಿ ಮನುಷ್ಯನಿಗೂ ಪ್ರತಿನಿತ್ಯ 3190 ಕ್ಯಾಲರಿ ಆಹಾರ ದೊರೆಯುವಂತೆ ಹಂಚಿದರೆ, 15.3 ಕೋಟಿ ಜನರಿಗೆ ಆಹಾರ ದೊರೆಯುವುದಿಲ್ಲ.”

ಪಟ್ಟಿ 3

| ದೇಶಗಳು | ಪ್ರತಿ ರೈತನಿಗೆ ಇದ್ದ ವ್ಯವಸಾಯಕ್ಕೆ ಯೋಗ್ಯವಾದ ಭೂಮಿ (ಹೆಕ್ಟೇರುಗಳಲ್ಲಿ) | ಪ್ರತಿ ಹೆಕ್ಟಾರಿಗೆ ಉಪಯೋಗಿಸಿದ ಕೃತಕ ಗೊಬ್ಬರಗಳು (ಕಿ. ಗ್ರಾಂ.ಗಳಲ್ಲಿ) | ಪ್ರತಿ ಹೆಕ್ಟಾರಿನಿಂದ ದೊರೆತ ಉತ್ಪನ್ನ (ಡಾಲರ್ ಮೊತ್ತದಲ್ಲಿ) |
|---|---|---|---|
| ಒಂದನೇ ಗುಂಪು | | | |
| ಇಸ್ರೇಲ್ | 4.1 | 80.5 | 557 |
| ಅರ್ಜೆಂಟೈನಾ | 13.1 | ದೊರೆತಿಲ್ಲ | 78 |
| ಸ್ಪೇನ್ | 4.4 | 31.6 | 150 |
| ಪೋಲೆಂಡ್ | 2.4 | 49.0 | 252 |
| ಚಿಲಿ | 9.3 | 17.0 | 59 |
| ಕೊಲಂಬಿಯಾ | 1.9 | ದೊರೆತಿಲ್ಲ | 270 |

3ನೇ ಪಟ್ಟಿ (ಮುಂದುವರಿದುದು)

| ದೇಶಗಳು | ಪ್ರತಿ ರೈತನಿಗೆ ಇದ್ದ ವ್ಯವಸಾಯಕ್ಕೆ ಯೋಗ್ಯವಾದ ಭೂಮಿ (ಹೆಕ್ಟೇರುಗಳಲ್ಲಿ) | ಪ್ರತಿ ಹೆಕ್ಟಾರಿಗೆ ಉಪಯೋಗಿಸಿದ ಕೃತಕ ಗೊಬ್ಬರಗಳು (ಕಿ. ಗ್ರಾಂಗಳಲ್ಲಿ) | ಪ್ರತಿ ಹೆಕ್ಟಾರಿನಿಂದ ದೊರೆತ ಉತ್ಪನ್ನ (ಡಾಲರ್ ಮೊತ್ತದಲ್ಲಿ) |
|---|---|---|---|
| ವೆನಿಜೂಲ | 3.2 | 3.8 | 150 |
| ಜಪಾನ್ | 0.4 | 303.7 | 961 |
| ಗ್ರೀಸ್ | 1.9 | 38.0 | 205 |
| ಮೆಕ್ಸಿಕೊ | 4.1 | 9.4 | 110 |
| ಸರಾಸರಿ | 4.5 | 66.6 | 279 |
| ಎರಡನೇ ಗುಂಪು | | | |
| ಈಜಿಪ್ಟ್ | 0.6 | 87.0 | 643 |

| | | | |
|---|---|---|---|
| ಟರ್ಕಿ | 2.6 | 1.5 | 127 |
| ಯುಗೋಸ್ಲಾವಿಯ | 1.8 | 28.0 | 141 |
| ಬ್ರೆಜಿಲ್ | 1.4 | 13.0 | 104 |
| ಟೈವಾನ್ | 0.6 | 203.8 | 477 |
| ಪಾಕಿಸ್ತಾನ | 1.5 | 3.2 | 133 |
| ಫಿಲಿಪ್ಪೈನ್ಸ್ | 1.2 | 12.5 | 139 |
| ಇಂಡಿಯಾ | 1.2 | 2.3 | 91 |
| ಥೈಲಾಂಡ್ | 0.9 | 2.3 | 106 |
| ಸರಾಸರಿ | 1.3 | 39.3 | 218 |

ಆಧಾರ : "ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ವ್ಯವಸಾಯ—ಅಮೇರಿಕಾ ಸರ್ಕಾರದ ಒಂದು ಅಧ್ಯಯನ" **ಕಾಮರ್ಸ್ ನಿಯತ ಕಾಲಿಕೆ** (ಮುಂಬಯಿ; ಜೂನ್ 25, 1966) ಪು. 1124, ಪಟ್ಟಿ 3.

ಮೇಲ್ಕಂಡ ಅಧ್ಯಯನದಿಂದ ಪ್ರತಿ ಎಕರೆಗೂ ಆದಷ್ಟು ಉತ್ಪನ್ನ ಹೆಚ್ಚಿಸುವುದು ಅತ್ಯವಶ್ಯಕ ಎಂಬುದು ಕಂಡುಬರುತ್ತದೆ. ಈ ದಿಸೆಯಲ್ಲಿ ಅಮೆರಿಕಾದ ಆರ್ಥಿಕ ನೆರವು ಇಂಡಿಯಾಕ್ಕೆ ದೊರೆತಿದೆ.

1953ರಲ್ಲಿ ಮೊದಲ ಬಾರಿಗೆ ಅಮೆರಿಕಾ ಮತ್ತು ಇಂಡಿಯಾ ಸರ್ಕಾರಗಳ ಮಧ್ಯೆ ತಾಂತ್ರಿಕ ಸಹಕಾರದ ವಿಷಯವಾಗಿ ಒಪ್ಪಂದವಾಯಿತು. ಈ ತಾಂತ್ರಿಕ ಸಹಕಾರವು ವ್ಯವಸಾಯದ ಅಭಿವೃದ್ಧಿಗಾಗಿ ಅಮೆರಿಕಾದಿಂದ ದೊರೆಯಿತು. 1969ರ ವರೆಗೆ ಅಮೆರಿಕಾವು 525 ಕೋಟಿ ರೂಪಾಯಿಗಳ ಮೊತ್ತದಷ್ಟು ವಿದೇಶಿ ವಿನಿಮಯವನ್ನು ಇಂಡಿಯಾದ ವ್ಯವಸಾಯದ ಅಭಿವೃದ್ಧಿ ಕಾರ್ಯಗಳಿಗೆ ಒದಗಿಸಿದೆ. ಇವರಲ್ಲಿ ಬಹುಪಾಲು ಕೃತಕ ಗೊಬ್ಬರಗಳನ್ನು ಪರದೇಶಗಳಿಂದ ಆಮದು ಮಾಡಿಕೊಳ್ಳುವುದಕ್ಕಾಗಿ ಕೊಡಲಾಗಿದೆ. ಇದಲ್ಲದೆ 750 ಕೋಟಿ ರೂ. ಮೊತ್ತದಷ್ಟು ಸಹಾಯವನ್ನು ರೂಪಾಯಿ ಮೌಲ್ಯದಲ್ಲಿ ವ್ಯವಸಾಯದ ಅಭಿವೃದ್ಧಿಗೆ ಕೊಡಲಾಗಿದೆ. ಒಟ್ಟಿನಲ್ಲಿ ವ್ಯವಸಾಯದ ಕ್ಷೇತ್ರಕ್ಕೆ 1275 ಕೋಟಿ ರೂ.ನಷ್ಟು ಸಹಾಯ ಅಮೆರಿಕಾದಿಂದ ದೊರೆತಿದೆ.[16]

ಇಂಡಿಯಾದಲ್ಲಿ ಈಗ ಅಧಿಕ ಉತ್ಪನ್ನ ಕೊಡುವ ಬೀಜಗಳನ್ನು ಬಿತ್ತಿ ಫಸಲನ್ನು ಹೆಚ್ಚಿಸುವುದು ವ್ಯವಸಾಯ ಕ್ಷೇತ್ರದ ಮುಖ್ಯ ಗುರಿಗಳಲ್ಲಿ ಒಂದಾಗಿದೆ. ಆದರೆ

[16] ಅಮೆರಿಕಾದ ವಾರ್ತಾ ಸಂಸ್ಥೆ ಪ್ರಕಟಣೆ: ಆಗಸ್ಟ್ 27. 1969.

ಈ ಬೀಜಗಳಿಂದ ಫಸಲನ್ನು ಪಡೆಯುವಾಗ ರೈತರು
ಕೆಲವು ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ರೈತರಿಗೆ
ನೆರವಾಗಲು ವ್ಯವಸಾಯದ ಇಲಾಖೆಯುವರು ಅನೇಕ
ವಿಸ್ತರಣಾ ಯೋಜನೆಗಳನ್ನು ಕೈಗೊಂಡಿದ್ದಾರೆ. ವ್ಯವ
ಸಾಯದ ಇಲಾಖೆಯುವರು ರೈತರಿಗೆ ಒದಗುವ ಸಮಸ್ಯೆ
ಗಳನ್ನು ಬಗೆಹರಿಸುವುದರಲ್ಲಿ ತಮಗೆ ಸಹಾಯ ನೀಡ
ಬೇಕೆಂದು ಅಮೆರಿಕಾ ಪ್ರತಿನಿಧಿಗಳನ್ನು ಕೇಳಿಕೊಂಡಿ
ದ್ದಾರೆ. ಈ ಕೋರಿಕೆಯ ಮೇರೆಗೆ ಅಮೆರಿಕನ್
ತಜ್ಞರು ಆಂಧ್ರ. ಬಿಹಾರ, ಗುಜರಾತ್, ತಮಿಳುನಾಡು,
ಮಹಾರಾಷ್ಟ್ರ. ಮೈಸೂರು ಮತ್ತು ಒರಿಸ್ಸಾ ಸಂಸ್ಥಾನ
ಗಳಲ್ಲಿ ಸ್ಥಳೀಯ ವ್ಯವಸಾಯ ಅಧಿಕಾರಿಗಳ ಜೊತೆ
ಗೂಡಿ ರೈತರಿಗೆ ಹೊಸದಾಗಿ ಕಂಡುಬಂದಿರುವ ಸಮಸ್ಯೆ
ಗಳನ್ನು ಬಗೆಹರಿಸಲು ಸಹಾಯ ಮಾಡುತ್ತಿದ್ದಾರೆ.

ಅಧಿಕ ಉತ್ಪನ್ನ ಕೊಡುವ ಬೀಜಗಳಿಂದ ಸರಿಯಾಗಿ
ಉತ್ಪನ್ನ ಪಡೆಯಬೇಕಾದರೆ ಸಾಕಷ್ಟು ಪ್ರಮಾಣದಲ್ಲಿ
ಕೃತಕ ಗೊಬ್ಬರಗಳನ್ನು ಉಪಯೋಗಿಸಬೇಕು. ಅದರ
ಪರಿಣಾಮವಾಗಿ 1965 ರಿಂದ ಇಂಡಿಯಾದಲ್ಲಿ ಕೃತಕ
ಗೊಬ್ಬರಗಳಿಗೆ ಬೇಡಿಕೆ ಅಧಿಕವಾಗಿದೆ. ಆದರೆ ಇಂಡಿಯಾ
ದಲ್ಲಿ ಉತ್ಪನ್ನ ಬಹಳ ಕಡಿಮೆ ಇದೆ. ಇಂತಹ ಕ್ಲಿಷ್ಟ
ಪರಿಸ್ಥಿತಿಯಲ್ಲಿ ಕೃತಕ ಗೊಬ್ಬರದ ಉತ್ಪನ್ನ ದೇಶದೊಳಗೆ
ಹೆಚ್ಚುವಂತೆ ಮಾಡಲು ಮತ್ತು ಗೊಬ್ಬರವನ್ನು ಆಮದು
ಮಾಡಿಕೊಳ್ಳಲು ಅಮೆರಿಕಾ ಸಹಾಯ ನೀಡಿತು.

ಮುಂಬಯಿ ಹತ್ತಿರ ಇರುವ ಟ್ರಾಂಬೆಯಲ್ಲಿ, ಮದರಾಸಿನಲ್ಲಿ ಮತ್ತು ವಿಶಾಖಪಟ್ಟಣಗಳಲ್ಲಿ ದೊಡ್ಡ ಪ್ರಮಾಣದ ಕೃತಕ ಗೊಬ್ಬರ ಕಾರ್ಖಾನೆಗಳನ್ನು ಸ್ಥಾಪಿಸುವುದರಲ್ಲಿ ಅಮೆರಿಕಾ ಸಹಾಯ ಮಾಡಿದೆ. 50 ಕೋಟಿ ರೂ. ವೆಚ್ಚದಲ್ಲಿ ನಿರ್ಮಿಸಲ್ಪಟ್ಟಿರುವ ವಿಶಾಖಪಟ್ಟಣದ ಕಾರ್ಖಾನೆಗೆ 31.70 ಕೋಟಿ ರೂ. ನಷ್ಟು ಸಾಲವು ಅಮೆರಿಕಾದಿಂದ ದೊರೆತಿದೆ. ಈ ಕಾರ್ಖಾನೆಯು 1 ದಿನಕ್ಕೆ 1000 ಟನ್ ಗೊಬ್ಬರ ತಯಾರಿಸಿ ಮಾರುತ್ತಿದೆ. ಇದರಿಂದ ಇಂಡಿಯಾ ದೇಶವು 16 ಕೋಟಿ ರೂ. ನಷ್ಟು ವಿದೇಶಿ ವಿನಿಮಯವನ್ನು ಪ್ರತಿ ವರ್ಷ ಉಳಿಸಿದಂತಾಯಿತು.

ಟ್ರಾಂಬೆ ಮತ್ತು ಮದರಾಸಿನಲ್ಲಿ ನಿರ್ಮಿತವಾಗಿರುವ ಕಾರ್ಖಾನೆಗಳು ಇಂಡಿಯಾ ಸರ್ಕಾರದ ಅಧೀನದಲ್ಲಿವೆ. ಇವೆರಡಕ್ಕೂ ಅಮೆರಿಕಾ ನೆರವು ನೀಡಿದೆ. ಇದಲ್ಲದೆ ಖಾಸಗೀ ಕ್ಷೇತ್ರದಲ್ಲಿ ಸ್ಥಾಪಿಸಲ್ಪಡುತ್ತಿರುವ ಗೋವಾ ಮತ್ತು ಕಾಂಡ್ಲ ಕಾರ್ಖಾನೆಗಳಿಗೂ ಅಮೆರಿಕಾ ನೆರವು ನೀಡಿದೆ.

ದೇಶದೊಳಗೆ ಕೃತಕ ಗೊಬ್ಬರ ಉತ್ಪನ್ನ ಹೆಚ್ಚಾಗುವ ತನಕ ಗೊಬ್ಬರಗಳನ್ನು ಆಮದು ಮಾಡಿಕೊಳ್ಳಲು ಅಮೆರಿಕಾ ವಿದೇಶಿ ವಿನಿಮಯ ಒದಗಿಸಿದೆ. ವರ್ಷಕ್ಕೆ ಸುಮಾರು 75 ಕೋಟಿ ರೂ. ಮೌಲ್ಯದಷ್ಟು ಗೊಬ್ಬರ ಆಮದು ಮಾಡಿಕೊಳ್ಳಲು ಅಮೆರಿಕಾ ಏರ್ಪಾಡು ಮಾಡಿದೆ.

ಅನೇಕ ಸಲ ಕ್ರಿಮಿಕೀಟಗಳಿಂದ ಮತ್ತು ವಿವಿಧ ರೀತಿಯ ರೋಗಗಳಿಂದ ಇಂಡಿಯಾದಲ್ಲಿ ಬೆಳೆಗಳು ನಾಶವಾಗುತ್ತಿವೆ. ಇಂತಹ ಅನಾಹುತವನ್ನು ತಡೆಗಟ್ಟಲು ಕೇಂದ್ರ ಸರ್ಕಾರ ಒಂದು ವ್ಯಾಪಕ ಕಾರ್ಯಕ್ರಮವನ್ನು ಕೈಗೊಂಡಿದೆ. ಕ್ರಿಮಿಕೀಟನಾಶಕ ಔಷಧಿಗಳ ಉಪಯೋಗ 1957 ಮತ್ತು 1969ರ ಮಧ್ಯೆ ಶೇ. 12ರಷ್ಟು ಹೆಚ್ಚಾಗಿದೆ. ಇಂಡಿಯಾ ದೇಶದಲ್ಲಿ ಈಗ ತನಗೆ ಬೇಕಾಗುವ ಕ್ರಿಮಿಕೀಟನಾಶಕ ಔಷಧಿಗಳ ಪೈಕಿ ಶೇಕಡಾ 70ರಷ್ಟು ಮಾತ್ರ ಉತ್ಪತ್ತಿಯಾಗುತ್ತಿದೆ. ಆದುದರಿಂದ ಔಷಧಿಗಳ ಉತ್ಪನ್ನ ಹೆಚ್ಚಿಸುವುದಕ್ಕೋಸ್ಕರ ಹೊಸ ಕಾರ್ಖಾನೆಗಳನ್ನು ಸ್ಥಾಪಿಸಲು ಅಮೆರಿಕಾ ನೆರವು ನೀಡುತ್ತಿದೆ. ವಿಮಾನಗಳ ಮೂಲಕ ಔಷಧಿಗಳನ್ನು ಸಿಂಪಡಿಸಿ ಬೆಳೆಗಳಿಗೆ ಉಂಟಾಗುವ ಹಾನಿಯನ್ನು ತಡೆಗಟ್ಟಲು ಇಂಡಿಯಾದಲ್ಲಿ ಆಗಿಂದಾಗ್ಗೆ ಏರ್ಪಾಡು ಮಾಡಲಾಗುತ್ತಿದೆ. ಇವುಗಳಿಗೆ ಅಗತ್ಯವಾದ ವಿಮಾನಗಳನ್ನು ಕೊಳ್ಳಲು ಇಂಡಿಯಾ ಸರ್ಕಾರಕ್ಕೆ ಅಮೆರಿಕಾ ನೆರವು ನೀಡಿದೆ. ಇದುವರೆಗೆ 2.18 ಕೋಟಿ ರೂ. ನಷ್ಟು ಸಾಲ ಕೊಟ್ಟು ವಿಮಾನಗಳನ್ನು ಕೊಳ್ಳಲು ಏರ್ಪಾಡು ಮಾಡಲಾಗಿದೆ.

ಆಹಾರ ಧಾನ್ಯಗಳ ಉತ್ಪನ್ನಕ್ಕೆ ಅತಿ ಮುಖ್ಯವಾದದ್ದು ನೀರಾವರಿ ಸೌಕರ್ಯ. ಈ ದಿಸೆಯಲ್ಲಿ ಅಮೆರಿಕಾ ಸಾಕಷ್ಟು ನೆರವು ನೀಡಿದೆ. ನೀರಾವರಿ ಯೋಜನೆಗಳನ್ನು ರೂಪಿಸಲು ಮತ್ತು ಅವು ಪೂರೈಸಿದ ಮೇಲೆ

ಅವುಗಳಿಂದ ದೊರೆಯುವ ನೀರನ್ನು ವ್ಯಯವಾಡದೆ ಉಪಯೋಗಿಸಿಕೊಳ್ಳುವಂತೆ ಮಾಡಲು ಇಂಡಿಯಾ ಸರಕಾರಕ್ಕೆ ನೆರವು ನೀಡಲು ನಾಲ್ಕು ಅಮೆರಿಕನ್ ತಜ್ಞರು ಕೇಂದ್ರ ಸರ್ಕಾರದ ಕೃಷಿ ಇಲಾಖೆಯಲ್ಲಿ ಸಲಹೆಗಾರರಾಗಿ ಕೆಲಸ ಮಾಡುತ್ತಿದ್ದಾರೆ.

ರೈತರಿಗೆ ನೀರಿನ ಸದುಪಯೋಗ ತೋರಿಸಿ ಕೊಡಲು ಕೆಲವು ಸಂಸ್ಥಾನಗಳಲ್ಲಿ ಅಮೆರಿಕನ್ ತಜ್ಞರು ಮಾರ್ಗದರ್ಶಕ ಯೋಜನೆಗಳನ್ನು ಪ್ರಾರಂಭಿಸಿದ್ದಾರೆ. ಮೈಸೂರು ಸಂಸ್ಥಾನದ ಬಳ್ಳಾರಿಯಲ್ಲಿ, ಪಂಜಾಬ್ ಸಂಸ್ಥಾನದ ಪಾಟಿಯಾಲದಲ್ಲಿ ಮತ್ತು ಉತ್ತರ ಪ್ರದೇಶದ ದೋರಿಘಾಟ್‌ನಲ್ಲಿ ಇಂತಹ ಕೇಂದ್ರಗಳನ್ನು ಸ್ಥಾಪಿಸಲಾಗಿದೆ.

ಹನ್ನೆರಡು ದೊಡ್ಡ ನೀರಾವರಿ ಯೋಜನೆಗಳಿಗೆ ಅಮೆರಿಕನ್ ಸಹಾಯ ದೊರೆತಿದೆ. ಇದರ ಪರಿಣಾಮವಾಗಿ 1970ರ ಕೊನೆಗೆ 90 ಲಕ್ಷ ಎಕರೆ ಜಮೀನಿಗೆ ಹೊಸದಾಗಿ ನೀರಾವರಿ ಸೌಕರ್ಯ ದೊರೆಯುತ್ತದೆ. ಮುಂದಿನ ಪುಟದ 4ನೇ ಪಟ್ಟಿಯಲ್ಲಿ ಕಾಣಿಸಿರುವಂತೆ ಅಮೆರಿಕಾ, ಸಾಲ ಮತ್ತು ಸಹಾಯಧನದ ರೂಪದಲ್ಲಿ ವಿವಿಧ ನೀರಾವರಿ ಯೋಜನೆಗಳಿಗೆ ಸಹಾಯ ನೀಡಿದೆ.

ಹಳ್ಳಿಗಳಲ್ಲಿ ನೀರಾವರಿ ಸೌಕರ್ಯ ಒದಗಿಸಿಕೊಡುವುದಕ್ಕೋಸ್ಕರ ಗ್ರಾಮಾಂತರ ಪ್ರದೇಶಗಳಿಗೆ ವಿದ್ಯುಚ್ಛಕ್ತಿ ಸೌಕರ್ಯ ಒದಗಿಸಲು ಇಂಡಿಯಾ ಸರ್ಕಾರ ಒಂದು ವಿಶಿಷ್ಟ ಯೋಜನೆಯನ್ನು ಕೈಗೊಂಡಿದೆ. ಅನೇಕ ಹಳ್ಳಿ

[51ನೇ ಪುಟದಲ್ಲಿ ಮುಂದುವರಿದಿದೆ

**ಪಟ್ಟಿ 4**

**ರೂಪಾಯಿ ಮೌಲ್ಯದಲ್ಲಿ 1969ರ ವರೆಗೆ ಅಮೆರಿಕಾ ಒದಗಿಸಿರುವ ಸಹಾಯ**

(ಕೋಟಿ ರೂಪಾಯಿಗಳಲ್ಲಿ)

| ನೀರಾವರಿ ಯೋಜನೆಗಳು | ಸಾಲ | ಸಹಾಯಧನ |
|---|---|---|
| 1. ಭದ್ರಾ (ಮೈಸೂರು) | 13.23 | — |
| 2. ಚಂಬಲ್ (ರಾಜಾಸ್ಥಾನ ಮತ್ತು ಮಧ್ಯಪ್ರದೇಶ) | 32.17 | 1.90 |
| 3. ದಾಮೋದರ (ಬಿಹಾರ ಮತ್ತು ಬಂಗಾಳ) | 10.47 | 0.89 |
| 4. ಹಿರಾಕುಡ್ (ಒರಿಸ್ಸಾ) | 3.68 | 1.31 |
| 5. ಕಕ್ರಾಪರ (ಗುಜರಾತ್) | 4.29 | 0.08 |
| 6. ಕೋಸಿ (ಬಿಹಾರ) | 36.82 | — |
| 7. ಕೊಯ್ನ (ಮಹಾರಾಷ್ಟ್ರ) | 19.94 | 0.57 |

4ನೇ ಪಟ್ಟಿ ಮುಂದುವರಿದುದು

| ನೀರಾವರಿ ಯೋಜನೆಗಳು | ಸಾಲ | ಸಹಾಯಧನ |
|---|---|---|
| 8. ಕುಂದ್ (ತಮಿಳುನಾಡು) | 7.63 | — |
| 9. ಮಹಾನದಿ (ಒರಿಸ್ಸಾ) | 14 55 | — |
| 10. ಮಾಹಿ ಕಾಲುವೆ (ಗುಜರಾತ್) | 2.73 | 1.19 |
| 11. ನಾಗಾರ್ಜುನ ಸಾಗರ (ಆಂಧ್ರ) | 66.95 | — |
| 12. ತುಂಗಭದ್ರ (ಮೈಸೂರು ಮತ್ತು ಆಂಧ್ರ) | 23.44 | — |
| ಮೊತ್ತ | 235.90 | 5.94 |

ಆಧಾರ : ಅಮೆರಿಕಾದ ವಾರ್ತಾ ಇಲಾಖೆಯ ಪ್ರಕಟಣೆ, ದೆಹಲಿ; ಅಗಸ್ಟ್ 27, 1969.

ಗಳಲ್ಲಿ ಬಾವಿಗಳಿಂದ ನೀರನ್ನು ಹಾಯಿಸಿಕೊಳ್ಳಬೇಕಾದರೆ ವಿದ್ಯುಚ್ಛಕ್ತಿ ಪಂಪುಗಳನ್ನು ಹಾಕುವುದು ಆವಶ್ಯಕ ಎಂಬ ತೀರ್ಮಾನಕ್ಕೆ ಬರಲಾಯಿತು. ಈಗ ವಿದ್ಯುಚ್ಛಕ್ತಿ ಪಂಪುಗಳು ಬಹಳ ಜನಪ್ರಿಯವಾಗಿವೆ. ಆದುದರಿಂದ ಗ್ರಾಮಾಂತರ ವಿದ್ಯುಚ್ಛಕ್ತಿ ಕಾರ್ಪೊರೇಷನ್ ಅನ್ನು ಸ್ಥಾಪಿಸಿ ಅದರ ಮೂಲಕ ಗ್ರಾಮಗಳಿಗೆ ವಿದ್ಯುಚ್ಛಕ್ತಿ ಸರಬರಾಜು ಮಾಡುವ ಕಾರ್ಯ ಈಗ ಆರಂಭವಾಗಿದೆ. 1969ರಲ್ಲಿ ಅಮೆರಿಕಾ ಈ ಕಾರ್ಪೊರೇಷನ್‌ಗೆ 105 ಕೋಟಿ ರೂ. ಸಹಾಯಧನ ಕೊಟ್ಟಿದೆ. ಈ ಕಾರ್ಪೊರೇಷನ್ ನಾಲ್ಕನೆ ಪಂಚವಾರ್ಷಿಕ ಯೋಜನೆಯಲ್ಲಿ 5 ಲಕ್ಷ ವಿದ್ಯುಚ್ಛಕ್ತಿ ಪಂಪುಗಳನ್ನು ಹಳ್ಳಿಗಳಲ್ಲಿ ರೈತರಿಗೆ ಒದಗಿಸಿಕೊಡುವ ಕಾರ್ಯಕ್ರಮ ಇಟ್ಟುಕೊಂಡಿದೆ. ಇದರಿಂದ 25 ಲಕ್ಷ ಎಕರೆಗೆ ನೀರಾವರಿ ಸೌಕರ್ಯ ದೊರೆತು 15 ಲಕ್ಷ ಟನ್ ಅಧಿಕ ಆಹಾರಧಾನ್ಯ ಬೆಳೆಯುಲು ಸಹಾಯಕವಾಗುತ್ತದೆ ಎಂದು ಅಂದಾಜು ಮಾಡಲಾಗಿದೆ.

ಕೃಷಿ ವಿಜ್ಞಾನದಲ್ಲಿ ತರಬೇತಿ ಕೊಡಲು ಇಂಡಿಯಾದಲ್ಲಿ ಎಂಟು ಹೊಸ ಕೃಷಿ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಲು ಅಮೆರಿಕಾ ನೆರವು ನೀಡಿದೆ. ಇಂಡಿಯಾದಲ್ಲಿ ಅನೇಕ ವರ್ಷಗಳಿಂದ ವ್ಯವಸಾಯವೇ ಪ್ರಮುಖ ಉದ್ಯೋಗವಾಗಿದ್ದರೂ ಇಂಡಿಯಾದ ಜನರನ್ನು ಕೃಷಿ ವಿಜ್ಞಾನದಲ್ಲಿ ತರಬೇತು ಮಾಡಲು ಬ್ರಿಟಿಷ್ ಸರ್ಕಾರ ಗಮನ ಕೊಟ್ಟಿರಲಿಲ್ಲ. ಕೆಲವು ಕೃಷಿ ಕಾಲೇಜುಗಳನ್ನು

ಪಟ್ಟಣಗಳಲ್ಲಿ ಸ್ಥಾಪಿಸಲಾಗಿತ್ತು. ಅಲ್ಲಿ ತರಬೇತಿ ಪಡೆದವರು ವ್ಯವಸಾಯ ಇಲಾಖೆಯಲ್ಲಿ ಅಧಿಕಾರಿಗಳಾಗುವುದರಲ್ಲೇ ತಮ್ಮ ಕಾಲವನ್ನೆಲ್ಲಾ ವಿನಿಯೋಗಿಸುತ್ತಿದ್ದರೇ ಹೊರತು ರೈತರ ಮಧ್ಯೆ ಇದ್ದು ಎಂದೂ ತಮ್ಮ ಜ್ಞಾನವನ್ನು ಅವರಿಗೆ ತಿಳಿಸುವ ಪ್ರಯತ್ನ ಮಾಡುತ್ತಿರಲಿಲ್ಲ. ತಾವೂ ಕೂಡ ರೈತರ ಜೊತೆಯಲ್ಲಿ ಜಮೀನಿನಲ್ಲಿ ಕೆಲಸ ಮಾಡಿ ಉತ್ತಮ ವಿಧಾನಗಳನ್ನು ತೋರಿಸಿ ಕೊಡುವ ಪ್ರಯತ್ನ ಮಾಡಲಿಲ್ಲ. ಈ ಪದ್ಧತಿಯನ್ನು ನೋಡಿ ಅಮೆರಿಕನರಿಗೆ ಆಶ್ಚರ್ಯವಾಯಿತು. ಅಮೆರಿಕನ್ ಕೃಷಿ ಕಾಲೇಜುಗಳಲ್ಲಿ ತರಬೇತಿ ಪಡೆಯುವವರು ರೈತರ ಹಾಗೆಯೇ ಕೆಲಸ ಮಾಡಬೇಕು. ಅಂತಹ ಪದ್ಧತಿಯನ್ನು ಇಂಡಿಯಾದಲ್ಲೂ ಜಾರಿಗೆ ತರಲು ಕೃಷಿ ವಿಶ್ವವಿದ್ಯಾನಿಲಯಗಳನ್ನು ಅಮೆರಿಕನ್ ಮಾದರಿಯಲ್ಲಿ ಸ್ಥಾಪಿಸಲು ಸಹಾಯ ಮಾಡಿತು. ಈ ಕೆಳಗೆ ಕಂಡ ಅಮೆರಿಕನ್ ವಿಶ್ವವಿದ್ಯಾನಿಲಯಗಳು ಇಂಡಿಯಾದ ರಾಜ್ಯಗಳಲ್ಲಿ ಕೃಷಿ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಲು ನೆರವು ನೀಡಿ ಈಗಲೂ ಹೊಸ ವಿಶ್ವವಿದ್ಯಾನಿಲಯಗಳೊಂದಿಗೆ ಸಹಕರಿಸುತ್ತಿವೆ.

ಕಾನ್‌ಸಾಸ್ ವಿಶ್ವವಿದ್ಯಾನಿಲಯವು ಆಂಧ್ರಪ್ರದೇಶದಲ್ಲಿ; ಇಲಿನಾಯಸ್ ವಿಶ್ವವಿದ್ಯಾನಿಲಯವು ಮಧ್ಯಪ್ರದೇಶ ಮತ್ತು ಉತ್ತರ ಪ್ರದೇಶಗಳಲ್ಲಿ; ಪೆನ್‌ಸಿಲ್‌ವೇನಿಯ ವಿಶ್ವವಿದ್ಯಾನಿಲಯವು ಮಹಾರಾಷ್ಟ್ರದಲ್ಲಿ; ಟೆನಸಿ ವಿಶ್ವವಿದ್ಯಾನಿಲಯವು ಮೈಸೂರಿನಲ್ಲಿ; ಮಿಸ್ಸೋರಿ

ವಿಶ್ವವಿದ್ಯಾನಿಲಯವು ಒರಿಸ್ಸಾದಲ್ಲಿ ಮತ್ತು ಓಹಿಯೋ ವಿಶ್ವವಿದ್ಯಾನಿಲಯವು ಪಂಜಾಬ್ ಮತ್ತು ರಾಜಾಸ್ಥಾನಗಳಲ್ಲಿ ಕೃಷಿ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಲು ಸಹಾಯ ಮಾಡಿವೆ.

ಈ ಮೇಲ್ಕಂಡ ವಿಶ್ವವಿದ್ಯಾನಿಲಯಗಳು ಹೊಸ ಸಂಶೋಧನೆಗಳನ್ನು ನಡೆಸಿ ಇಂಡಿಯಾದ ವ್ಯವಸಾಯದ ಪ್ರಗತಿಗೆ ಸಹಾಯ ಮಾಡಿವೆ. ಪಂಜಾಬ್ ಮತ್ತು ಉತ್ತರ ಪ್ರದೇಶ ಕೃಷಿ ವಿಶ್ವವಿದ್ಯಾನಿಲಯಗಳು ಅಧಿಕ ಉತ್ಪನ್ನ ಕೊಡುವ ಮೆಕ್ಕೇಜೋಳ ಮತ್ತು ಗೋಧಿ ತಳಿಗಳನ್ನು ಅಭಿವೃದ್ಧಿಪಡಿಸಿದವು. ಎಲ್ಲಾ ವಿಶ್ವವಿದ್ಯಾನಿಲಯಗಳು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಾಯೋಗಿಕ ಕೇಂದ್ರಗಳನ್ನು ಸ್ಥಾಪಿಸಿ ಅಲ್ಲಿ ರೈತರಿಗೆ ಹೊಸ ಮಾದರಿಯ ವ್ಯವಸಾಯದ ಕ್ರಮಗಳನ್ನು ತೋರಿಸಿಕೊಟ್ಟು ಅವರುಗಳು ನೂತನ ಮಾರ್ಗ ಅನುಸರಿಸುವಂತೆ ಪ್ರೋತ್ಸಾಹಿಸುತ್ತಿವೆ.

ಈ ಮೇಲ್ಕಂಡ ಮುಖ್ಯ ಕ್ಷೇತ್ರಗಳಲ್ಲದೆ ಅಮೆರಿಕಾವು ಆಹಾರ ಧಾನ್ಯಗಳನ್ನು (ಪಿ.ಎಲ್. 480 ಒಪ್ಪಂದದ ಪ್ರಕಾರ) ಒದಗಿಸುವುದರ ಮೂಲಕ ಇಂಡಿಯಾಕ್ಕೆ ಕಷ್ಟಕಾಲದಲ್ಲಿ ನೆರವು ನೀಡಿದೆ. 1965-67ರ ಅವಧಿಯಲ್ಲಿ ಇಂಡಿಯಾ ಬಹಳ ಕಷ್ಟ ಎದುರಿಸುತ್ತಿದ್ದಾಗ ಆಹಾರ ಧಾನ್ಯಗಳನ್ನು ಸರಬರಾಜು ಮಾಡುವುದರ ಮೂಲಕ ಇಂಡಿಯಾದ ಜನರ ನೆರವಿಗೆ ಅಮೆರಿಕಾ ಧಾವಿಸಿ

[56ನೇ ಪುಟದಲ್ಲಿ ಮುಂದುವರಿದಿದೆ

## ಪಟ್ಟಿ 5

## 1956 ರಿಂದ 1969ರ ವರೆಗೆ ಒದಗಿಸಿರುವ ಕಚ್ಚಾವಸ್ತು, ಆಹಾರ ಪದಾರ್ಥಗಳು ಮತ್ತು ಅವುಗಳ ಮೌಲ್ಯ

| | ಇಂಡಿಯಾಕ್ಕೆ ಬಂದಿರುವ ಆಹಾರ ಧಾನ್ಯಗಳು ಮತ್ತು ಕಚ್ಚಾವಸ್ತುಗಳು (ಸಾವಿರ ಮೆಟ್ರಿಕ್ ಟನ್‌ಗಳಲ್ಲಿ) | ವಸ್ತುಗಳ ಮೌಲ್ಯ (ದಶಲಕ್ಷ ಡಾಲರುಗಳಲ್ಲಿ) |
|---|---|---|
| 1. ಗೋಧಿ | 46,632.5 | 2.949.0 |
| 2. ಮೆಕ್ಕೆಜೋಳ ಮತ್ತು ಇತರ ಜಾತಿಯ ಜೋಳ | 5053.0 | 278.8 |
| 3. ಅಕ್ಕಿ | 1760.6 | 225.9 |
| 4. ಹತ್ತಿ | 2,571.9 | 400.6 |

| | | |
|---|---|---|
| | (ಬೇಲುಗಳು) | |
| 5. ಕೊಬ್ಬು (ಟಾಲೊ) | 79.0 | 28.7 |
| 6. ಒಣಗಿದ ಹಾಲು | 21.0 | 4.6 |
| 7. ಹೊಗೆಸೊಪ್ಪು | 6.9 | 17.3 |
| 8. ಸೊಯಾಬೀನ್ ಎಣ್ಣೆ | 288.4 | 83.2 |
| 9. ಹಾಲಿನ ಪುಡಿ | 15.22 | 4.4 |
| 10. ಬೆಣ್ಣೆ | 0.10 | 0.1 |
| 11. ಡಬ್ಬದಲ್ಲಿ ತುಂಬಿದ ಹಣ್ಣುಗಳು | 0.42 | 0.1 |
| | | 3,992.7 |

ಆಧಾರ : ಅಮೆರಿಕಾದ ವಾರ್ತಾ ಸಂಸ್ಥೆ ಪ್ರಕಟಣೆ ; ದೆಹಲಿ ; ಆಗಸ್ಟ್ 27, 1969.

ಬಂದಿತು. 1956ರಲ್ಲಿ ಮೊದಲ ಒಪ್ಪಂದ ಅಮೆರಿಕಾ ಮತ್ತು ಇಂಡಿಯಾಗಳ ನಡುವೆ ಆಯಿತು. 1956 ರಿಂದ 1969ವರೆಗೆ ಇಂಡಿಯಾಕ್ಕೆ ಬಂದಿರುವ ಆಹಾರ ಧಾನ್ಯಗಳು ಮತ್ತು ಅವುಗಳ ಬೆಲೆಯನ್ನು 54 ಮತ್ತು 55ನೇ ಪುಟದ ಪಟ್ಟಿಯಲ್ಲಿ ಕೊಡಲಾಗಿದೆ.

ಪಟ್ಟಿಯಲ್ಲಿನ ಮೊತ್ತದ ಆಹಾರ ಧಾನ್ಯಗಳನ್ನು ಮತ್ತು ಕಚ್ಚಾವಸ್ತುಗಳನ್ನು ಒದಗಿಸಿರುವುದಲ್ಲದೆ ಅವುಗಳನ್ನು ಸಾಗಿಸಲು ತಗುಲಿದ ಖರ್ಚನ್ನೂ ಕೂಡ ಅಮೆರಿಕಾ ಕೊಟ್ಟಿದೆ. (ಸುಮಾರು 453.5 ದಶಲಕ್ಷ ಡಾಲರ್ ಮೊತ್ತದ ಸಾಗಾಣಿಕೆ ಖರ್ಚನ್ನು ಅಮೆರಿಕಾ ಕೊಟ್ಟಿದೆ).

ವಿವಿಧ ರೀತಿಯಲ್ಲಿ ಅಮೆರಿಕಾ ಆರ್ಥಿಕ ಸಹಾಯವನ್ನು ನೀಡಿರುವುದನ್ನು ಪರೀಕ್ಷಿಸಿದರೆ ಒಂದು ಪ್ರಮುಖ ಅಂಶ ಕಂಡುಬರುತ್ತದೆ. ಇಂಡಿಯಾ ದೇಶವು ತನ್ನ ಎಲ್ಲಾ ಸಂಪತ್ತನ್ನು ಉಪಯೋಗಿಸಿಕೊಂಡು ಆಹಾರದಲ್ಲಿ ಸ್ವಯಂ ಪರಿಪೂರ್ಣತೆಯನ್ನು ಪಡೆಯಲಿ ಎಂಬುದೇ ಅಮೆರಿಕಾ ಆರ್ಥಿಕ ಸಹಾಯದ ಮುಖ್ಯ ಗುರಿಯಾಗಿದೆ. ಮೊದಲ ಬಾರಿಗೆ ಇಂಡಿಯಾ ತನ್ನ ದೇಶದ ವ್ಯವಸಾಯದ ಸಮಸ್ಯೆಗಳನ್ನು ಬಗೆಹರಿಸಲು ಪಣ ತೊಟ್ಟಿದೆ. ಆದುದರಿಂದ ಈ ಪ್ರಯತ್ನದಲ್ಲಿ ಇಂಡಿಯಾಕ್ಕೆ ಸಹಾಯ ನೀಡುವುದು ತನ್ನ ಆದ್ಯ ಕರ್ತವ್ಯ ಎಂದು ಅಮೆರಿಕಾ ಭಾವಿಸಿದೆ.

## ೫. ಇಂಡಿಯಾ ದೇಶದ ಕೈಗಾರಿಕಾಭಿವೃದ್ಧಿಗೆ ಅಮೆರಿಕಾದ ಆರ್ಥಿಕ ನೆರವು

ಕಳೆದ 20 ವರ್ಷಗಳಲ್ಲಿ (1950–70) ಇಂಡಿಯಾದ ಕೈಗಾರಿಕೆಗಳು ಶೀಘ್ರಗತಿಯಲ್ಲಿ ಬೆಳೆದಿವೆ. ಇಂಡಿಯಾದಲ್ಲಿ ಸಾಕಷ್ಟು ಕಚ್ಚಾವಸ್ತುಗಳು, ಕೂಲಿಗಾರರು ಮತ್ತು ಅನುಭವಶಾಲಿಗಳು ಇರುವುದರಿಂದ ಇದು ಸಾಧ್ಯವಾಯಿತು. ಇವರ ಜೊತೆಗೆ ವಿದೇಶಗಳಿಂದ ದೊರೆತ ನೆರವೂ ಕೂಡ ಬಹಳ ಮಟ್ಟಿಗೆ ಕೈಗಾರಿಕೆಗಳ ಬೆಳವಣಿಗೆಗೆ ಪ್ರೋತ್ಸಾಹವಿತ್ತಿದೆ. ವಿದೇಶಿ ನೆರವಿನಲ್ಲಿ ಬಹುಭಾಗ ಅಮೆರಿಕಾದಿಂದ ಬಂದಿದೆ.

ಸ್ವಾತಂತ್ರ್ಯಕ್ಕೆ ಮುಂಚೆ ವ್ಯವಸ್ಥಿತ ರೀತಿಯಲ್ಲಿ ಕೆಲವು ಕೈಗಾರಿಕೆಗಳು ಮಾತ್ರ ಇಂಡಿಯಾದಲ್ಲಿದ್ದವು. ಹತ್ತಿ ಬಟ್ಟೆ, ಸೆಣಬು, ಸಿಮೆಂಟ್, ಸಕ್ಕರೆ, ಕಾಗದ, ಗಾಜು, ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆಗಳು ಮಾತ್ರ ಪ್ರಮುಖ ಕೈಗಾರಿಕೆಗಳಾಗಿದ್ದವು. 1955 ರಿಂದ ದೊಡ್ಡ ಪ್ರಮಾಣದಲ್ಲಿ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸಲು ಪ್ರಾರಂಭವಾಯಿತು. ಇದರ ಪರಿಣಾಮವಾಗಿ ಕೈಗಾರಿಕಾ ಉತ್ಪನ್ನ ಸುಮಾರು 3ರಷ್ಟು ಏರಿತು. ಕೈಗಾರಿಕಾ ಉತ್ಪನ್ನದ ಸೂಚ್ಯಂಕಗಳು (ಇಂಡೆಕ್ಸ್ ನಂಬರು) 1951 ರಲ್ಲಿ 74 ಇದ್ದದ್ದು 1968 ರ ಕೊನೆಗೆ 200ಕ್ಕೆ ಏರಿದೆ. (ಆಧಾರ ವರ್ಷ 1956 = 100) ಜೊತೆಗೆ ಹೊಸದಾಗಿ ಸೀಮೆ ಗೊಬ್ಬರ, ಕೈಗಾರಿಕೆಯಲ್ಲಿ ಉಪಯೋಗಿಸುವ ಯಂತ್ರಗಳ ಉತ್ಪಾದನೆ, ವೈಜ್ಞಾನಿಕ

ಉಪಕರಣಗಳು, ಮೋಟಾರು ವಾಹನಗಳು, ರೈಲ್ವೆ ಬಂಡಿಗಳು, ಹಡಗುಗಳು, ವಿಮಾನಗಳು, ವಿದ್ಯುಚ್ಛಕ್ತಿಯ ಯಂತ್ರಗಳು ಮತ್ತು ಉಪಕರಣಗಳು, ರಸಾಯನಿಕ ವಸ್ತುಗಳು, ಪ್ಲಾಸ್ಟಿಕ್ ಮತ್ತು ಕೃತಕ ರಬ್ಬರ್ ಇತ್ಯಾದಿ ಕೈಗಾರಿಕೆಗಳನ್ನು ಸ್ಥಾಪಿಸಲಾಯಿತು.

ಕೈಗಾರಿಕೆಗಳ ಬೆಳವಣಿಗೆಯ ಪರಿಣಾಮವಾಗಿ ಇಂಡಿಯಾ ದೇಶವು ತನಗೆ ಬೇಕಾದ ವಸ್ತುಗಳಲ್ಲಿ ಬಹು ಪಾಲನ್ನು ತಾನೇ ತಯಾರಿಸುತ್ತಿರುವುದಲ್ಲದೆ, ಆಮದಿನ ಪ್ರಮಾಣವನ್ನು ತಗ್ಗಿಸಿ ಕೆಲವು ವಸ್ತುಗಳನ್ನು ರಫ್ತು ಮಾಡುವ ಶಕ್ತಿ ಪಡೆದಿದೆ. ಉದಾಹರಣೆಗೆ, ಸಕ್ಕರೆ ಕಾರ್ಖಾನೆಗಳಿಗೆ ಬೇಕಾದ ಯಂತ್ರಗಳನ್ನು 1951ರಲ್ಲಿ ಸಂಪೂರ್ಣವಾಗಿ ಹೊರಗಿನಿಂದ ಆಮದು ಮಾಡಿಕೊಳ್ಳಲಾಗುತ್ತಿತ್ತು. ಆದರೆ 1967-68ರ ಕೊನೆ ವೇಳೆಗೆ ಶೇಕಡಾ 1.4 ಭಾಗ ಮಾತ್ರ ಆಮದು ಮಾಡಿಕೊಳ್ಳಲಾಗುತ್ತಿತ್ತು. ಇದೇ ರೀತಿ ಕಬ್ಬಿಣ ಮತ್ತು ಉಕ್ಕಿನ ಆಮದು ಶೇಕಡಾ 25.2ರಿಂದ ಶೇ. 11.5ಕ್ಕೂ, ಅಲ್ಯೂಮಿನಿಯಂ ಆಮದು ಶೇಕಡಾ 72.8ರಿಂದ ಶೇ. 27.9ಕ್ಕೂ ಇಳಿಯಿತು. ಬೈಸಿಕಲ್‌ಗಳು ಮತ್ತು ಹೊಲಿಗೆ ಯಂತ್ರಗಳ ಪೈಕಿ 1950-51ರಲ್ಲಿ ಶೇಕಡಾ 50ರಷ್ಟನ್ನು ಆಮದು ಮಾಡಿಕೊಳ್ಳುತ್ತಿದ್ದೆವು. ಆದರೆ ಇಂಡಿಯಾ ಈಗ ಅವುಗಳನ್ನು ರಫ್ತು ಮಾಡುವ ಶಕ್ತಿ ಪಡೆದಿದೆ.

ವಿವಿಧ ರೀತಿಯ ಕೈಗಾರಿಕೆಗಳ ಬೆಳವಣಿಗೆಗೆ ಅನೇಕ ವಿದೇಶಿ ರಾಷ್ಟ್ರಗಳು ಸಾಲ, ಸಹಾಯಧನ ಮತ್ತು

ತಾಂತ್ರಿಕ ಜ್ಞಾನ ಒದಗಿಸುವುದರ ಮೂಲಕ ಸಹಾಯ ಮಾಡಿವೆ. ವಿದೇಶಿ ರಾಷ್ಟ್ರಗಳು ಕೊಟ್ಟ ಸಹಾಯದ ಪೈಕಿ ½ಕ್ಕಿಂತ ಹೆಚ್ಚು ಭಾಗ ಅಮೆರಿಕಾದಿಂದ ಬಂದಿದೆ. ಅಮೆರಿಕಾದ ಆರ್ಥಿಕ ಸಹಾಯವನ್ನು ನಿರ್ದೇಶಿಸುವ ಮಂಡಲಿಯು ಮುಂದಿನ ಪಟ್ಟಿಯಲ್ಲಿ ಕಾಣಿಸಿರುವಂತೆ 1967ರ ಕೊನೆಯವರೆಗೆ ವಿವಿಧ ಕೈಗಾರಿಕಾಭಿವೃದ್ಧಿ ಕಾರ್ಯಗಳಿಗೆ ಸಾಲಕೊಟ್ಟಿದೆ.

ಅಮೆರಿಕಾದಿಂದ ಯಂತ್ರೋಪಕರಣಗಳನ್ನು ಆಮದು ಮಾಡಿಕೊಳ್ಳುವುದಕ್ಕಾಗಿ ಖಾಸಗೀ ಮತ್ತು ಸರ್ಕಾರಿ ಕಂಪನಿಗಳಿಗೆ ಅಮೆರಿಕಾದ ರಫ್ತು ಮತ್ತು ಆಮದು ಬ್ಯಾಂಕು 1967ರ ಕೊನೆವರೆಗೆ 418 ದಶಲಕ್ಷ ಡಾಲರುಗಳಷ್ಟು ಸಾಲ ಒದಗಿಸಿತ್ತು. ಈ ಸಾಲದ ಮೇಲೆ ಶೇಕಡಾ 7ರಷ್ಟು ಬಡ್ಡಿ ಕೊಡಬೇಕು. ಇದಲ್ಲದೆ ಕೂಲಿ ನಿಧಿಯಿಂದ 57 ಸಂಸ್ಥೆಗಳಿಗೆ ಅಮೆರಿಕಾ ಆರ್ಥಿಕ ಸಹಾಯ ಮಂಡಲಿಯು 55·2 ಕೋಟಿ ರೂಪಾಯಿ ಮೌಲ್ಯದಷ್ಟು ಸಾಲ ಒದಗಿಸಿದೆ. ಅಮೆರಿಕದ ಅನೇಕ ಕಂಪನಿಗಳು ಇಂಡಿಯಾದ ಕಂಪೆನಿಗಳ ಜೊತೆ ಸೇರಿ 1965ರ ಕೊನೆವೇಳೆಗೆ 407 ದಶಲಕ್ಷ ಡಾಲರುಗಳಷ್ಟು ಬಂಡವಾಳವನ್ನು ಕೈಗಾರಿಕೆಗಳಲ್ಲಿ ಹಾಕಿದ್ದವು.

ಅಮೆರಿಕಾದ ಆರ್ಥಿಕ ನೆರವು ಕೈಗಾರಿಕಾ ಉತ್ಪನ್ನವನ್ನು ಹೆಚ್ಚಿಸುವುದಕ್ಕೆ ಸಹಾಯವಾಗಿರುವುದಲ್ಲದೆ ಕೆಲವು ಆದರ್ಶಗಳನ್ನು ಕೈಗಾರಿಕಾ ಸಂಸ್ಥೆಗಳು ಎತ್ತಿ ಹಿಡಿಯು

[62ನೇ ಪುಟದಲ್ಲಿ ಮುಂದುವರಿದಿದೆ

ಪಟ್ಟಿ 6

ಅಮೆರಿಕಾ 1967ರ ಕೊನೆಯವರೆಗೆ ಒದಗಿಸಿರುವ ಸಾಲಗಳು (ದಶಲಕ್ಷ ಡಾಲರುಗಳಲ್ಲಿ)

| | ರೂಪಾಯಿ ಮೌಲ್ಯದಲ್ಲಿ ವಾಪಸ್ಸು ಕೊಡಬೇಕಾದ ಸಾಲ | ಡಾಲರ್ ರೂಪದಲ್ಲಿ ವಾಪಸ್ಸು ಕೊಡಬೇಕಾದ ಸಾಲ |
|---|---|---|
| 1. ವಿದ್ಯುಚ್ಛಕ್ತಿ ಉತ್ಪಾದಿಸುವ ಮತ್ತು ಹಂಚುವ ಸಂಸ್ಥೆಗಳಿಗೆ: | | |
| a) ಸರ್ಕಾರಿ ಸಂಸ್ಥೆಗಳು | 136.1 | 289.20 |
| b) ಖಾಸಗೀ ,, | 3.9 | 17.90 |
| 2. ರೈಲ್ವೆ ಅಭಿವೃದ್ಧಿಗೆ | 115.0 | 69.90 |
| 3. ಉಕ್ಕನ್ನು ಕೊಳ್ಳಲು | 85 0 | — |
| 4. ಮೋಟಾರುಗಳನ್ನು ತಯಾರಿಸಲು : | | |
| a) ಸರ್ಕಾರಿ ಸಂಸ್ಥೆಗಳು | 39.1 | — |
| b) ಖಾಸಗೀ ,, | 7.2 | 67.30 |

| | | |
|---|---|---|
| 5. ಖಾಸಗೀ ಕ್ಷೇತ್ರದಲ್ಲಿ ಕೈಗಾರಿಕೆಗಳ ಅಭಿವೃದ್ಧಿಗೆ | | |
| a) ಬಂಡವಾಳ ವಸ್ತುಗಳನ್ನು ಆಮದು ಮಾಡಿಕೊಳ್ಳಲು | 49.0 | — |
| b) ಕೈಗಾರಿಕೆಗಳನ್ನು ಸ್ಥಾಪಿಸಲು | 20.0 | 1155.00 |
| 6. ಕಲ್ಲಿದ್ದಲಿನ ಗಣಿಗಳಿಗೆ | — | 17.00 |
| 7. ಕೃತಕ ಗೊಬ್ಬರಗಳ ಉತ್ಪಾದನೆಗೆ | 30.0 | 57.80 |
| 8. ಕೈಗಾರಿಕಾ ಹಣಕಾಸಿನ ಕಾರ್ಪೊರೇಷನ್ | 25.0 | 30.00 |
| 9. ಇನ್ನು ಕೆಲವು ಕೈಗಾರಿಕಾ ಸಂಸ್ಥೆಗಳಿಗೆ | — | 19.35 |
| 10. ತಜ್ಞರುಗಳನ್ನು ಕರೆಯಿಸಿಕೊಂಡು ಅವರ ಸೇವೆ ಪಡೆಯುವುದಕ್ಕೆ | — | 2.00 |
| 11. ಖನಿಜಾಭಿವೃದ್ಧಿ | — | 3.50 |
| ಒಟ್ಟು ಮೊತ್ತ | 510.3 | 1728.95 |

ಆಧಾರ: ಈಸ್ಟರ್ನ್ ಎಕಾನಮಿಸ್ಟ್ ನಿಯತ ಕಾಲಿಕೆ ಪರಿಶಿಷ್ಟ; ಜೂನ್ 25, 1969; ಪು. 9.

ವುದಕ್ಕೆ ಪ್ರೋತ್ಸಾಹ ನೀಡಿದೆ. ಅಮೆರಿಕದ ವಿಜ್ಞಾನಿಗಳು, ತಜ್ಞರು ಮತ್ತು ವಾಣಿಜ್ಯೋದ್ಯಮಿಗಳು ತಮ್ಮ ನಡತೆಯಿಂದ ಇಂಡಿಯಾದ ಕೈಗಾರಿಕಾ ಸಂಸ್ಥೆಗಳ ಅಧಿಕಾರಿಗಳ ಮೇಲೆ ಮಹತ್ವದ ಪರಿಣಾಮ ಉಂಟು ಮಾಡಿದ್ದಾರೆ. ತಮ್ಮ ಕಾರ್ಯವನ್ನು ನಿರ್ವಹಿಸುವುದರಲ್ಲಿ ದಕ್ಷತೆಯನ್ನು ತೋರಿಸಬೇಕೆಂತಲೂ, ಉತ್ಪಾದನೆಯನ್ನು ಹೆಚ್ಚಿಸುವುದಕ್ಕೆ ಶಕ್ತಿ ಮೀರಿ ಶ್ರಮಿಸಬೇಕೆಂತಲೂ, ಮತ್ತು ಸರಿಯಾಗಿ ಯೋಚಿಸಿ ನಿರ್ಧಾರ ಕೈಗೊಂಡ ಮೇಲೆ ಮಾತ್ರ ಉತ್ಪಾದನಾ ಕಾರ್ಯ ಪ್ರಾರಂಭಿಸಬೇಕೆಂತಲೂ ಅನೇಕ ಇಂಡಿಯಾದ ವಾಣಿಜ್ಯ ಮತ್ತು ಕೈಗಾರಿಕಾ ಸಂಸ್ಥೆಗಳ ಉನ್ನತಮಟ್ಟದ ಅಧಿಕಾರಿಗಳು ಈಗ ಅಮೆರಿಕನ್ನರಿಂದ ಪಾಠ ಕಲಿತುಕೊಂಡಿದ್ದಾರೆ. ಸಂಶೋಧನೆ ನಡೆಸುವುದು ಕೈಗಾರಿಕಾ ಸಂಸ್ಥೆಗಳ ಅವಿಭಾಜ್ಯ ಅಂಗ ಎಂಬುದನ್ನು ಅನೇಕ ಇಂಡಿಯಾದ ಕೈಗಾರಿಕೋದ್ಯಮಿಗಳು ಈಗ ಅರಿತಿದ್ದಾರೆ.

## ೬. ಇಂಡಿಯಾದಲ್ಲಿ ವಿದ್ಯಾಭ್ಯಾಸದ ಬೆಳವಣಿಗೆಗೆ ಅಮೆರಿಕದ ಆರ್ಥಿಕ ಸಹಾಯ

1947ರಲ್ಲಿ ಇಂಡಿಯಾ ದೇಶವು ಸ್ವತಂತ್ರವಾದಾಗ ಒಟ್ಟು ಜನಸಂಖ್ಯೆಯ ಶೇಕಡಾ 15 ಕ್ಕಿಂತಲೂ ಕಡಿಮೆ ಜನರು ಅಕ್ಷರಸ್ಥರಾಗಿದ್ದರು. 6 ರಿಂದ 11 ವರ್ಷ ವಯಸ್ಸಿನೊಳಗಿದ್ದ ಮಕ್ಕಳ ಪೈಕಿ ಕಾಲು ಭಾಗ ($\frac{1}{4}$) ಮಾತ್ರ ಪಾಠಶಾಲೆಗಳಿಗೆ ಹೋಗುತ್ತಿದ್ದರು. 12 ರಿಂದ 16 ವರ್ಷ ವಯಸ್ಸಿನೊಳಗಿದ್ದ ಮಕ್ಕಳ ಪೈಕಿ $\frac{1}{5}$ ಭಾಗದಷ್ಟು ಮಕ್ಕಳು ಹೈಸ್ಕೂಲುಗಳಿಗೆ ಹೋಗುತ್ತಿದ್ದರು. ಕಾಲೇಜುಗಳು ಮತ್ತು ವಿಶ್ವವಿದ್ಯಾನಿಲಯಗಳಿಗೆ ಹೋಗುತ್ತಿದ್ದ ವಿದ್ಯಾರ್ಥಿಗಳ ಸಂಖ್ಯೆ ಸುಮಾರು $2\frac{1}{2}$ ಲಕ್ಷದಷ್ಟು ಇತ್ತು. ತಾಂತ್ರಿಕ ಶಾಲೆಗಳಿಗೆ ಹೋಗುತ್ತಿದ್ದ ವಿದ್ಯಾರ್ಥಿಗಳ ಸಂಖ್ಯೆಯಂತೂ ತೀರಾ ಕಡಿಮೆಯಾಗಿತ್ತು.[17]

ಮಕ್ಕಳು ಮತ್ತು ಯುವಕರಿಗೆ ಆದಷ್ಟು ಜಾಗ್ರತೆ ವಿದ್ಯಾಭ್ಯಾಸದ ಸೌಕರ್ಯವನ್ನು ಒದಗಿಸಿಕೊಡುವುದೇ ನಮ್ಮ ರಾಷ್ಟ್ರೀಯ ಸರ್ಕಾರದ ಮುಖ್ಯ ಕೆಲಸವಾಯಿತು. ಕೇವಲ ಕೆಲವು ವರ್ಗದ ಮಕ್ಕಳಿಗೆ ಮಾತ್ರ ವಿದ್ಯಾಭ್ಯಾಸದ ಸೌಕರ್ಯ ಮೀಸಲಾಗಿರದೆ ದೇಶದ ಎಲ್ಲಾ ಕಡೆಯೂ

---

[17] ಎಸ್. ಚಂದ್ರಶೇಖರ: ಅಮೆರಿಕಾದ ಸಹಾಯ ಮತ್ತು ಇಂಡಿಯಾದ ಆರ್ಥಿಕ ಅಭಿವೃದ್ಧಿ (ನ್ಯೂಯಾರ್ಕ್ ; ಪ್ರೇಗರ್, ಪ್ರಕಾಶಕರು—1965) ಪು. 138.

ಮಕ್ಕಳಿಗೆ ಪಾಠಶಾಲೆಗಳ ಸೌಕರ್ಯ ಒದಗಿಸಲು ನಮ್ಮ ಸರ್ಕಾರ ಸಹಸ್ರಾರು ಪ್ರಾಥಮಿಕ ಶಾಲೆಗಳನ್ನು ತೆರೆಯಲು ನಿರ್ಧರಿಸಿತು. ಇಂಡಿಯಾ ದೇಶದ ರಾಜ್ಯಾಂಗವು 14 ವರ್ಷ ವಯಸ್ಸಿನೊಳಗಿನ ಮಕ್ಕಳಿಗೆಲ್ಲ ವಿದ್ಯಾಭ್ಯಾಸದ ಸೌಕರ್ಯ ಒದಗಿಸಬೇಕೆಂದು ನಮೂದಿಸಿದೆ. ಅದರ ಪ್ರಕಾರ ಸರ್ಕಾರ ಶಾಲೆಗಳ ಸಂಖ್ಯೆಯನ್ನು ಹೆಚ್ಚಿಸಿ ಹೆಚ್ಚು ಮಕ್ಕಳಿಗೆ ಅವಕಾಶ ದೊರಕಿಸಿಕೊಡುವ ಹೊಣೆಯನ್ನು ವಹಿಸಿಕೊಂಡಿತು. ಜೊತೆಗೆ ಇಂಡಿಯಾದ ಆರ್ಥಿಕ ಅಭಿವೃದ್ಧಿಗೆ ಸಹಾಯಕವಾಗಿರುವಂತೆ ವಿದ್ಯಾಭ್ಯಾಸ ಕ್ರಮವನ್ನು ರೂಪಿಸಿಕೊಳ್ಳಲು ಸರ್ಕಾರ ನಿರ್ಧರಿಸಿತು.

ಈ ಮೇಲ್ಕಂಡ ನಿರ್ಧಾರಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಬೃಹತ್ ಪ್ರಮಾಣದಲ್ಲಿ ಪ್ರಾಥಮಿಕ ಮತ್ತು ಪ್ರೌಢ ವಿದ್ಯಾಭ್ಯಾಸ ಯೋಜನೆಯನ್ನು ಇಂಡಿಯಾ ಜಾರಿಗೆ ತಂದಿತು. ಅಮೆರಿಕಾ ಇಂಡಿಯಾದ ವಿದ್ಯಾಭ್ಯಾಸದ ಪ್ರಗತಿಗಾಗಿ ಎಲ್ಲಾ ಹಂತಗಳಲ್ಲೂ ವಿವಿಧ ರೀತಿಯಲ್ಲಿ ನೆರವು ನೀಡಿದೆ.

ಪ್ರಾಥಮಿಕ ವಿದ್ಯಾಭ್ಯಾಸದ ಅಭಿವೃದ್ಧಿಗೆ ರೂಪಾಯಿ ಮೌಲ್ಯದಲ್ಲಿ 121·13 ಕೋಟಿಯಷ್ಟು ನೆರವನ್ನು ಅಮೆರಿಕಾ (1969ರ ವರೆಗೆ) ಇಂಡಿಯಾ ಸರ್ಕಾರಕ್ಕೆ ಒದಗಿಸಿದೆ. ಪ್ರಾಥಮಿಕ ಶಾಲೆಗಳ ಉಪಾಧ್ಯಾಯರ ತರಬೇತಿಗಾಗಿ, ವಿಜ್ಞಾನದ ಪಾಠಗಳ ಬೋಧನೆಯ ಮಟ್ಟ ಹೆಚ್ಚಿಸುವುದಕ್ಕೆ, ಉಪಾಧ್ಯಾಯರ ಸಂಬಳ ಉತ್ತಮಪಡಿಸುವುದಕ್ಕೆ ಮತ್ತು ಒಳ್ಳೆಯ ಪಠ್ಯಪುಸ್ತಕಗಳ

ತಯಾರಿಕೆಗಾಗಿ ಈ ನೆರವನ್ನು ಉಪಯೋಗಿಸಿಕೊಳ್ಳ ಲಾಗಿದೆ.

ಅಮೆರಿಕಾದ ಓಹಿಯೋ ವಿಶ್ವವಿದ್ಯಾನಿಲಯದ ಸಹ ಕಾರದ ಮೂಲಕ ಇಂಡಿಯಾ ಸರ್ಕಾರ ಅಜ್ಮೀರ್, ಭೂಪಾಲ್, ಭುವನೇಶ್ವರ ಮತ್ತು ಮೈಸೂರು ನಗರ ಗಳಲ್ಲಿ ನಾಲ್ಕು ಪ್ರಾದೇಶಿಕ ಶಿಕ್ಷಣ ಕಾಲೇಜುಗಳನ್ನು ಸ್ಥಾಪಿ ಸಿದೆ. ಇವುಗಳ ಮುಖ್ಯ ಉದ್ದೇಶವೇನೆಂದರೆ ಉತ್ತಮ ಮಟ್ಟದ ಹೈಸ್ಕೂಲು ಉಪಾಧ್ಯಾಯರುಗಳನ್ನು ತರಬೇತು ಮಾಡುವುದು. ಇಲ್ಲಿ ತರಬೇತಿ ಪಡೆದ ಉಪಾಧ್ಯಾಯರು ಗಳು ಉತ್ತಮ ರೀತಿಯ ಹೈಸ್ಕೂಲ್ ಶಿಕ್ಷಣ ಕ್ರಮವನ್ನು ಬೆಳಸಲು ಸಹಾಯಕರಾಗುತ್ತಾರೆ ಎಂದು ಸರ್ಕಾರ ಭಾವಿಸಿ ಈ ಕಾಲೇಜುಗಳನ್ನು ಸ್ಥಾಪಿಸಿದೆ. ವಿಜ್ಞಾನ, ವ್ಯವಸಾಯ, ವಾಣಿಜ್ಯ ಮತ್ತು ತಾಂತ್ರಿಕ ಭಾಗಗಳಲ್ಲಿ ಈ ಕಾಲೇಜುಗಳಲ್ಲಿ ತರಬೇತಿ ಕೊಡಲಾಗುತ್ತದೆ. ಆದುದರಿಂದ ಆಗಿಂದಾಗ್ಗೆ ಹೈಸ್ಕೂಲುಗಳಲ್ಲಿ ಸೇವೆ ಸಲ್ಲಿಸು ತ್ತಿರುವ ಉಪಾಧ್ಯಾಯರುಗಳೂ ಕೂಡ ಇಲ್ಲಿಗೆ ಬಂದು ತಮ್ಮ ಜ್ಞಾನಾರ್ಜನೆಯನ್ನು ಹೆಚ್ಚಿಸಿಕೊಳ್ಳಲು ಇವು ಸಹಾಯಕವಾಗಿವೆ.

ಇಂಜನಿಯರಿಂಗ್ ವಿದ್ಯಾಭ್ಯಾಸದ ಮಟ್ಟವನ್ನು ಹೆಚ್ಚಿ ಸಲು ಇಂಡಿಯಾದ ವಿವಿಧ ಪ್ರಾದೇಶಿಕ ಇಂಜನಿಯರಿಂಗ್ ಕಾಲೇಜುಗಳಿಗೆ ಅಮೆರಿಕಾ ಸಹಾಯಮಾಡಿದೆ. ಇವು ಗಳಿಗೆ ಬೇಕಾದ ಉಪಕರಣಗಳನ್ನು ಮತ್ತು ಸಾಮಗ್ರಿ ಗಳನ್ನು ಪಡೆಯಲು ಪಿ. ಎಲ್. 480 ನಿಧಿಯಿಂದ

1969ರ ವರೆಗೆ 26.57 ಕೋಟಿ ರೂ. ನಷ್ಟು ಸಾಲ ಒದಗಿಸಲಾಗಿದೆ. ಜೊತೆಗೆ 16 56 ಕೋಟಿ ರೂಪಾಯಿಗಳನ್ನು ಸಹಾಯಧನವನ್ನಾಗಿ ಕೊಡಲಾಗಿದೆ

ಕಾನ್ಪುರದಲ್ಲಿರುವ ಇಂಡಿಯಾದ ತಾಂತ್ರಿಕ ವಿದ್ಯಾಭ್ಯಾಸ ಸಂಸ್ಥೆಯ ಬೆಳವಣಿಗೆಗೆ (Indian Institute of Technology, Kanpur) ಅಮೆರಿಕಾ ಬಹಳ ನೆರವು ನೀಡಿದೆ. ಅಮೆರಿಕಾದ 9 ವಿಶ್ವವಿದ್ಯಾನಿಲಯಗಳ ಸಹಕಾರದಿಂದ ಕಾನ್ಪುರದ ಸಂಸ್ಥೆಯು ಸ್ಥಾಪಿಸಲ್ಪಟ್ಟಿದೆ. ಅಮೆರಿಕಾದಿಂದ 90 ಪ್ರಾಧ್ಯಾಪಕರುಗಳು ಬಂದು ಇಲ್ಲಿ ಕೆಲಸ ಮಾಡಿದ್ದಾರೆ. ಅನೇಕ ಇಂಡಿಯಾದ ನಿವಾಸಿಗಳು ತಾಂತ್ರಿಕ ವಿದ್ಯಾಭ್ಯಾಸದಲ್ಲಿ ಉನ್ನತ ಪದವಿ ಪಡೆದು ಅಮೆರಿಕಾದ ಬೇರೆ ಬೇರೆ ವಿಶ್ವವಿದ್ಯಾನಿಲಯಗಳಲ್ಲಿ ಕೆಲಸ ಮಾಡುತ್ತಿದ್ದರು. ಅವರುಗಳು ಇಂಡಿಯಾಕ್ಕೆ ವಾಪಸ್ಸು ಬರುವಂತೆ ಅಮೆರಿಕಾ ಪ್ರೋತ್ಸಾಹಿಸಿ ಅವರುಗಳು ಕಾನ್ಪುರದ ಸಂಸ್ಥೆಯಲ್ಲಿ ತಮ್ಮ ಸೇವೆ ಸಲ್ಲಿಸುವಂತೆ ಮಾಡಲಾಗಿದೆ. ಇದರ ಅಭಿವೃದ್ಧಿಗೆ 4.25 ಕೋಟಿ ರೂ. ಸಾಲವನ್ನೂ ಮತ್ತು 5.20 ಕೋಟಿ ರೂ. ಸಹಾಯ ಧನವನ್ನೂ ಅಮೆರಿಕಾ ಇದುವರೆಗೆ ಒದಗಿಸಿದೆ.

ಇದರ ಪರಿಣಾಮವಾಗಿ ಕಾನ್ಪುರ ಸಂಸ್ಥೆಯು ಏಷ್ಯಾದಲ್ಲೇ ಅತಿ ಉನ್ನತಮಟ್ಟದ ತಾಂತ್ರಿಕ ವಿದ್ಯಾಭ್ಯಾಸ ಕೊಡುವ ಸಂಸ್ಥೆ ಎಂದು ಹೆಸರು ಪಡೆದಿದೆ. ಈ ಸಂಸ್ಥೆಯನ್ನು ಅಮೆರಿಕಾದ ಮ್ಯಾಸಚುಸೆಟ್ಸ್ ತಾಂತ್ರಿಕ ವಿದ್ಯಾ

ಭ್ಯಾಸ ಸಂಸ್ಥೆಯ ಮಟ್ಟಕ್ಕೆ ತರಬೇಕೆಂಬುದೇ ಅಮೆರಿಕಾ ಮತ್ತು ಇಂಡಿಯಾ ಸರ್ಕಾರಗಳ ಗುರಿಯಾಗಿದೆ.

ಇಂಡಿಯಾದ ಶಾಲೆಗಳಲ್ಲಿ ಮತ್ತು ವಿಶ್ವವಿದ್ಯಾನಿಲಯ ಗಳಲ್ಲಿ ವಿಜ್ಞಾನ ಮತ್ತು ಗಣಿತ ಶಾಸ್ತ್ರಗಳನ್ನು ಇನ್ನೂ ಹಿಂದಿನ ರೀತಿಯಲ್ಲೇ ಬೋಧಿಸಲಾಗುತ್ತಿದೆ. ಪ್ರಪಂಚದ ಅನೇಕ ಮುಂದುವರಿದ ರಾಷ್ಟ್ರಗಳ ಬೋಧನಕ್ರಮದೊಡನೆ ಇಂಡಿಯಾದ ಬೋಧನ ಕ್ರಮವನ್ನು ಹೋಲಿಸಿದರೆ ನಮ್ಮ ದೇಶವು ಎಷ್ಟು ಹಿಂದುಳಿದಿದೆ ಎಂಬುದು ನಮಗೆ ತಿಳಿಯುತ್ತದೆ. ಆದುದರಿಂದ ವಿಜ್ಞಾನ ಮತ್ತು ಗಣಿತ ಶಾಸ್ತ್ರಗಳನ್ನು ಬೋಧಿಸುವ ಉಪಾಧ್ಯಾಯರುಗಳಿಗೆ ನವೀನ ರೀತಿಯಲ್ಲಿ ಬೋಧಿಸುವುದನ್ನು ಕಲಿಸಿಕೊಡಲು ಇಂಡಿಯಾ ಸರ್ಕಾರ ಅಮೆರಿಕಾ ಸರ್ಕಾರದ ಸಹಾಯ ದಿಂದ ಒಂದು ವ್ಯಾಪಕ ಕಾರ್ಯಕ್ರಮವನ್ನು ಪ್ರಾರಂಭಿ ಸಿದೆ.

ಬೇಸಿಗೆಯಲ್ಲಿ ವಿಶೇಷ ತರಗತಿಗಳನ್ನು ಪ್ರಾರಂಭಿಸಿ ಅಲ್ಲಿ ಕಾಲೇಜುಗಳ ಮತ್ತು ಹೈಸ್ಕೂಲುಗಳ ಅಧ್ಯಾಪಕರುಗಳಿಗೆ ವಿವಿಧ ವಿಜ್ಞಾನಶಾಸ್ತ್ರಗಳಲ್ಲಿ ಉಂಟಾಗಿರುವ ಬೆಳವಣಿಗೆ ಯನ್ನು ಬೋಧಿಸಿ ತರಬೇತಿ ಕೊಡಲಾಗುತ್ತಿದೆ. ಇದ ರಿಂದ ಅವರು ಹೊಸದಾಗಿ ಬೆಳಕಿಗೆ ಬಂದಿರುವ ಜ್ಞಾನ ವನ್ನು ಅಳವಡಿಸಿಕೊಂಡು ಉತ್ತಮ ದರ್ಜೆಯ ಅಧ್ಯಾಪಕ ರುಗಳಾಗಿ ಕೆಲಸ ಮಾಡಲು ಸಹಾಯಕವಾಗಿದೆ. ಈ ಕಾರ್ಯಕ್ರಮವು 1963 ರಿಂದ ಇಂಡಿಯಾದಲ್ಲಿ ಪ್ರಾರಂಭ ವಾಗಿ ಅಧ್ಯಾಪಕರುಗಳು ಇದನ್ನು ಬಹಳವಾಗಿ ಮೆಚ್ಚಿ

ಕೊಂಡಿದ್ದಾರೆ. ಈ ಕಾರ್ಯಕ್ರಮವನ್ನು ಯಶಸ್ವಿಯಾಗಿ ನಿರ್ವಹಿಸಲು ಅಮೆರಿಕಾ ಇಂಡಿಯಾ ಸರ್ಕಾರಕ್ಕೆ 6.75 ಕೋಟಿ ರೂ. ನಷ್ಟು ಸಾಲವನ್ನು ಕೊಟ್ಟಿದೆ.

1963 ರಿಂದ 1969ರ 25,000 ಇಂಡಿಯಾದ ಅಧ್ಯಾಪಕರುಗಳು ಈ ತರಗತಿಗಳ ಪ್ರಯೋಜನ ಪಡೆದಿದ್ದಾರೆ. 960 ಅಮೆರಿಕನ್ ಪ್ರೊಫೆಸರುಗಳು ಇಂಡಿಯಾದ ಬೇಸಿಗೆ ಶಾಲೆಗಳಿಗೆ ಬಂದು ಬೋಧಿಸಿದ್ದಾರೆ. ವಿಜ್ಞಾನ ಮತ್ತು ಗಣಿತಶಾಸ್ತ್ರಗಳಲ್ಲಿ ತರಬೇತಿ ಕೊಡಲು ಪ್ರಾರಂಭಿಸಲ್ಪಟ್ಟ ಬೇಸಿಗೆ ಶಾಲೆಗಳು ಈಗ ಅನೇಕ ವಿಷಯಗಳಲ್ಲಿ ತರಬೇತಿ ಕೊಡುವಂತೆ ವಿಸ್ತರಿಸಲ್ಪಟ್ಟವೆ. ಇಂಜನಿಯರಿಂಗ್ ವಿದ್ಯಾಭ್ಯಾಸ, ಅರ್ಥಶಾಸ್ತ್ರ, ವಾಣಿಜ್ಯ ಶಾಸ್ತ್ರ ಮತ್ತು ಶಿಕ್ಷಣ ಶಾಸ್ತ್ರಗಳಲ್ಲಿಯೂ ತರಬೇತಿ ಕೊಡಲು ಬೇಸಿಗೆಯಲ್ಲಿ ವಿವಿಧ ವಿಶ್ವವಿದ್ಯಾ ನಿಲಯಗಳ ಆಶ್ರಯದಲ್ಲಿ ಶಾಲೆಗಳನ್ನು ತೆರೆಯಲಾಗುತ್ತಿದೆ.

ಅಮೆರಿಕಾವು ಇಂಡಿಯಾದ ಎಲ್ಲಾ ರೀತಿಯ ವಿದ್ಯಾಭ್ಯಾಸದ ಯೋಜನೆಗಳಿಗೆ ಸಹಾಯ ನೀಡಲು ಮುಂದೆ ಬಂದಿರುವುದರಿಂದ ವಿದ್ಯಾಭ್ಯಾಸದ ಮಟ್ಟದಲ್ಲಿ ಪ್ರಗತಿ ಸಾಧಿಸಲು ಸಹಾಯಕವಾಗಿದೆ. ಬೇಸಿಗೆ ಶಾಲೆಗಳಂತೂ ಸಂಪೂರ್ಣವಾಗಿ ಅಮೆರಿಕದ ಸಲಹೆ ಮೇರೆಗೆ ಪ್ರಾರಂಭವಾದವು. ಇವರ ಪರಿಣಾಮವಾಗಿ ವಿಶ್ವವಿದ್ಯಾನಿಲಯದ ಮಟ್ಟದಲ್ಲಿ ಜ್ಞಾನಾರ್ಜನೆಯನ್ನು ಬೆಳೆಸಿಕೊಳ್ಳಲು ಅನೇಕ ಅಧ್ಯಾಪಕರಿಗೆ ಸಹಾಯವಾಗಿದೆ. ಅಮೆರಿಕಾದ ಪ್ರೊಫೆಸರುಗಳು ಇಂಡಿಯಾದ ಅಧ್ಯಾಪಕರ ಮೇಲೆ ಬಹಳ

ಪ್ರಭಾವ ಬೀರಿದ್ದಾರೆ. ಅಮೆರಿಕದ ಪ್ರೊಫೆಸರುಗಳು ತಮ್ಮ ಕೆಲಸದಲ್ಲಿ ತೋರುವ ಶ್ರದ್ಧೆ, ಜ್ಞಾನಾರ್ಜನೆಗಾಗಿ ಅವರು ಪಡುವ ಶ್ರಮ ಮತ್ತು ವಿದ್ಯಾರ್ಥಿಗಳೊಡನೆ ಅವರು ಕಲೆತು ವಿದ್ಯಾರ್ಥಿಗಳೂ ಕೂಡ ಕಷ್ಟಪಟ್ಟು ಕೆಲಸ ಮಾಡುವಂತೆ ಮಾಡುವುದು, ಇಂಡಿಯಾದ ಅಧ್ಯಾಪಕರುಗಳ ಮೇಲೆ ಬಹಳ ಪರಿಣಾಮವನ್ನುಂಟುಮಾಡಿದೆ.

## ೭. ಸಾರ್ವಜನಿಕ ಆರೋಗ್ಯವನ್ನು ಉತ್ತಮ ಗೊಳಿಸಲು ಇಂಡಿಯಾಕ್ಕೆ ಅಮೆರಿಕಾ ನೀಡಿರುವ ಆರ್ಥಿಕ ನೆರವು

1947ರ ವೇಳೆಗೆ ಇಂಡಿಯಾ ದೇಶದಲ್ಲಿದ್ದ ಸಾರ್ವಜನಿಕ ಆರೋಗ್ಯಸ್ಥಿತಿಯನ್ನು ಪಾಶ್ಚಿಮಾತ್ಯ ದೇಶಗಳ ಸಾರ್ವಜನಿಕ ಆರೋಗ್ಯ ಪರಿಸ್ಥಿತಿಗೆ ಹೋಲಿಸಿ ನೋಡಿದರೆ ಪಾಶ್ಚಿಮಾತ್ಯ ದೇಶಗಳ ಜನರಿಗೆ ಬಹಳ ಜಿಗುಪ್ಸೆಯಾಗುತ್ತಿತ್ತು. ಇಂತಹ ಪರಿಸ್ಥಿತಿ ಇಂಡಿಯಾದಲ್ಲಿ ಇದೆ ಎಂಬುದನ್ನು ಪಾಶ್ಚಿಮಾತ್ಯರು ಊಹಿಸಿಯೂ ಇರಲಿಲ್ಲ. ಮಲೇರಿಯಾ, ಸಿಡುಬು ಮತ್ತು ಕಾಲರಾ ಸಾಂಕ್ರಾಮಿಕ ರೋಗಗಳು, ಇಂಡಿಯಾದಲ್ಲಿ ಉಂಟಾಗುತ್ತಿದ್ದ ಒಟ್ಟು ಮರಣಗಳ ಪೈಕಿ, ಅರ್ಧಭಾಗ ಮರಣಗಳಿಗೆ ಕಾರಣವಾಗಿದ್ದವು. ಮಕ್ಕಳ ಮತ್ತು ಗರ್ಭಿಣಿಯರ ಮರಣ ಪ್ರಮಾಣವನ್ನು ಇತರ ಏಷ್ಯಾ ದೇಶಗಳೊಂದಿಗೆ ಹೋಲಿಸಿದರೆ ಇಂಡಿಯಾದಲ್ಲಿ ಅತ್ಯಧಿಕವಾಗಿತ್ತು. 1946ರಲ್ಲಿ ಇಂಡಿಯಾದಲ್ಲಿ ಒಬ್ಬ ಮನುಷ್ಯನ ಸರಾಸರಿ ಆಯುಷ್ಯ ಪ್ರಮಾಣ 32 ವರ್ಷಗಳಾಗಿತ್ತು. ಗ್ರಾಮಾಂತರ ಪ್ರದೇಶಗಳಲ್ಲಿ 25 ಸಾವಿರ ಪ್ರಜಾಸಂಖ್ಯೆಗೆ ಒಬ್ಬ ವೈದ್ಯರ ಸೇವೆಯು ಮತ್ತು 50 ಸಾವಿರ ಪ್ರಜಾಸಂಖ್ಯೆಗೆ ಒಂದು ಆಸ್ಪತ್ರೆಯ ಸೌಕರ್ಯವು ದೊರೆಯುತ್ತಿತ್ತು. ಇಂಡಿಯಾದಲ್ಲಿದ್ದ ಪಟ್ಟಣಗಳ ಪೈಕಿ $\frac{1}{4}$ ಭಾಗ ಪಟ್ಟಣಗಳಲ್ಲಿ

ಮಾತ್ರ ಶುದ್ಧವಾದ ಕುಡಿಯುವ ನೀರಿನ ಸೌಕರ್ಯವು ಮತ್ತು ಒಳ ಚರಂಡಿ ವ್ಯವಸ್ಥೆಯು ಇದ್ದವು.[18]

ಮೊದಲನೆ ಪಂಚವಾರ್ಷಿಕ ಯೋಜನೆ ಪ್ರಾರಂಭವಾದಾಗಿನಿಂದ ಕೇಂದ್ರ ಸರ್ಕಾರ ಇಂಡಿಯಾದಲ್ಲಿ ಸಾರ್ವಜನಿಕ ಆರೋಗ್ಯ ಸ್ಥಿತಿ ಮತ್ತು ವೈದ್ಯಕೀಯ ಸೌಕರ್ಯಗಳನ್ನು ಉತ್ತಮಪಡಿಸಲು ಅನೇಕ ಕಾರ್ಯಕ್ರಮಗಳನ್ನು ಕೈಗೊಂಡಿದೆ. ಆ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಪೂರೈಸಲು ಅಮೆರಿಕಾ ಈ ಕೆಳಗೆ ಕಂಡಂತೆ ಆರ್ಥಿಕ ನೆರವು ನೀಡಿದೆ:

### ಮಲೇರಿಯಾ ರೋಗದ ನಿರ್ಮೂಲನ

1947ಕ್ಕೆ ಮುಂಚೆ ಇಂಡಿಯಾದಲ್ಲಿ ಪ್ರತಿ ವರ್ಷ 10 ಲಕ್ಷ ಜನರು ಮಲೇರಿಯಾದಿಂದ ಸಾಯುತ್ತಿದ್ದರು. ಮಲೇರಿಯಾ ರೋಗದ ಪರಿಣಾಮವಾಗಿ ಇಂಡಿಯಾದ ಅನೇಕ ಕಡೆಗಳಲ್ಲಿ ಆರ್ಥಿಕ ಚಟುವಟಿಕೆಗಳನ್ನು ಕೈಗೊಳ್ಳುವುದೇ ಕಷ್ಟವಾಗಿತ್ತು. ಉದಾಹರಣೆಗೆ, ಪೂರ್ವ ಇಂಡಿಯಾದ ಒಂದು ಭಾಗದಲ್ಲಿ ಮಲೇರಿಯಾ ರೋಗದ ಪರಿಣಾಮವಾಗಿ 40 ವರ್ಷಗಳ ಕಾಲದವರೆಗೆ ರೈಲ್ವೆ ಮಾರ್ಗವನ್ನು ರಚಿಸಲಾಗಲಿಲ್ಲ. ಉತ್ತರ ಪ್ರದೇಶದಲ್ಲಿರುವ ಟಿರಾಯಿ ಭಾಗವು ಫಲವತ್ತಾದ ಪ್ರದೇಶವಾಗಿದ್ದರೂ

---

[18] ಹೊಸ ಇಂಡಿಯಾ—ಪ್ರಜಾಪ್ರಭುತ್ವದ ಹಾದಿಯಲ್ಲಿ ಪ್ರಗತಿ ಹೊಸ ದೆಹಲಿ; ಯೋಜನಾ ಆಯೋಗ 1959 ಪು. 7

ಮಲೇರಿಯಾದ ಪರಿಣಾಮವಾಗಿ ಅಲ್ಲಿ ಜನರು ನೆಲಸಿ ಬಹಳ ವರ್ಷಗಳ ವರೆಗೆ ಆ ಪ್ರದೇಶವನ್ನು ಅಭಿವೃದ್ಧಿ ಮಾಡಲಾಗಲಿಲ್ಲ. ಒಂದು ನೀರಾವರಿ ಯೋಜನೆಯನ್ನು ಉತ್ತರ ಪ್ರದೇಶದಲ್ಲಿ ಪ್ರಾರಂಭಿಸಿದಾಗ ಒಂದು ವರ್ಷ ವೆಲ್ಲಾ ಅಲ್ಲಿ ಕೆಲಸ ಮಾಡಲು ಆಗಲಿಲ್ಲ. ಏಕೆಂದರೆ ಅಲ್ಲಿ ಕೆಲಸಕ್ಕೆ ಬಂದ ಕೂಲಿಯಾಳುಗಳ ಪೈಕಿ 100 ರಲ್ಲಿ 96 ಜನರು ಮಲೇರಿಯಾದಿಂದ ನರಳುತ್ತಿದ್ದರು.[19]

ಇಂತಹ ರೋಗವನ್ನು ನಿರ್ಮೂಲನ ಮಾಡಲು 1952 ರಲ್ಲು ಕೇಂದ್ರ ಸರ್ಕಾರ ಬೃಹತ್ ಪ್ರಮಾಣದಲ್ಲಿ ಕಾರ್ಯ ಆರಂಭಿಸಿತು. 1958 ರಿಂದ ಈ ಯೋಜನೆಗೆ ನೆರವು ನೀಡಲು ಅಮೆರಿಕಾ ಪ್ರಾರಂಭಿಸಿತು. ಅಮೆರಿಕಾದ ಸಹಾಯವು ಈ ಕೆಳಗೆ ಕಂಡಂತೆ ದೊರೆಯಿತು: (1) 93, 493 ಟನ್ ಡಿ. ಡಿ. ಟಿ. ಔಷಧಿಯನ್ನು ಒದಗಿಸಿತು. (2) 1301 ಜೀಪು ಮತ್ತು ಲಾರಿಗಳನ್ನೂ, 780 ಸೂಕ್ಷ್ಮದರ್ಶಕ ಯಂತ್ರಗಳನ್ನೂ, ಪ್ರಯೋಗ ಶಾಲೆಗಳಲ್ಲಿ ಬೇಕಾಗುವ ಉಪಕರಣಗಳನ್ನೂ ಮತ್ತು ಔಷಧಗಳನ್ನೂ ಒದಗಿಸಿತು. 3) ಅಮೆರಿಕಾದ ವೈದ್ಯಕೀಯ ತಜ್ಞರನ್ನು ಇಂಡಿಯಾಕ್ಕೆ ಕಳುಹಿಸಲಾಯಿತು ಮತ್ತು ಇಂಡಿಯಾದ ವೈದ್ಯರನ್ನು ಪರದೇಶಗಳಿಗೆ ಕಳುಹಿಸಿ ತರಬೇತಿ ಕೊಡಲಾಯಿತು. 4) 85.15 ಕೋಟಿ

---

[19] ಎಸ್. ಚಂದ್ರಶೇಖರ: ಅಮೆರಿಕಾದ ಸಹಾಯ ಮತ್ತು ಇಂಡಿಯಾದ ಆರ್ಥಿಕ ಅಭಿವೃದ್ಧಿ : ಪು. 129

ರೂ. ಸಹಾಯ ದ್ರವ್ಯವನ್ನೂ ಮತ್ತು 19.46 ಕೋಟಿ ರೂ. ಸಾಲವನ್ನೂ ಕೊಡಲಾಗಿದೆ. (ಪಿ. ಎಲ್. 480 ನಿಧಿಯಿಂದ)[20]

ಇತರ ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟಲು ಅಮೆರಿಕಾ ಸಹಾಯ ಮಾಡಿದೆ. ಸಿಡುಬು ರೋಗ ನಿವಾರಣೆ ಕಾರ್ಯಕ್ರಮಗಳಿಗೆ ಪಿ. ಎಲ್. 480 ನಿಧಿಯಿಂದ 10.29 ಕೋಟಿ ರೂ. ನಷ್ಟು ಸಹಾಯ ಧನವನ್ನೂ ಮತ್ತು 3.73 ಕೋಟಿ ರೂ. ಸಾಲವನ್ನು ಕೊಡಲಾಗಿದೆ.

ವೈದ್ಯಕೀಯ ವಿದ್ಯಾಭ್ಯಾಸ

ಇಂಡಿಯಾದಲ್ಲಿ ವೈದ್ಯಕೀಯ ವಿದ್ಯಾಭ್ಯಾಸವನ್ನು ಅಭಿವೃದ್ಧಿ ಪಡಿಸುವುದರಲ್ಲಿ ಅಮೆರಿಕಾದ ನೆರವು ದೊರೆತಿದೆ. ಅಖಿಲ ಭಾರತ ವೈದ್ಯಕೀಯ ಶಾಸ್ತ್ರಗಳ ಸಂಸ್ಥೆ, ದೆಹಲಿ; ಮತ್ತು ಬರೋಡಾ, ಕಟಕ್, ಹೈದರಾಬಾದು, ಇಂದೂರು, ಜಯಪುರ, ಮೈಸೂರು ಮತ್ತು ತಿರುವಾಂಕೂರುಗಳಲ್ಲಿರುವ ವೈದ್ಯಕೀಯ ಕಾಲೇಜುಗಳಿಗೆ ಉಪಕರಣಗಳನ್ನು ಮತ್ತು ಧನಸಹಾಯವನ್ನು ಒದಗಿಸುವುದರ ಮೂಲಕ ಸಹಾಯ ಮಾಡಿದೆ. ವೈದ್ಯಕೀಯ ವಿದ್ಯಾಭ್ಯಾಸಕ್ಕಾಗಿ 7.40 ಕೋಟಿ ರೂ. ಸಹಾಯ ಧನವನ್ನೂ

---

[20] ಇಂಡಿಯಾ ಅಮೆರಿಕಾ ತಾಂತ್ರಿಕ ಸಹಕಾರ ಯೋಜನೆ, ಪ್ರಕಾಶನ ಸಚಿವಾಲಯ, ಇಂಡಿಯಾ ಸರ್ಕಾರ; 1966. ಪು. 63

ಒದಗಿಸಿದೆ. 400 ವೈದ್ಯಕೀಯ ಕಾಲೇಜುಗಳ ಉಪಾಧ್ಯಾಯರುಗಳಿಗೆ ಅಮೆರಿಕಾದಲ್ಲಿ ತರಬೇತಿ ಕೊಡಲಾಗಿದೆ.

ಗ್ರಾಮಾಂತರ ಪ್ರದೇಶಗಳಲ್ಲಿ ವೈದ್ಯಕೀಯ ಸೌಕರ್ಯ ಒದಗಿಸಲು ಕೇಂದ್ರ ಸರ್ಕಾರ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸಲಾರಂಭಿಸಿತು. ಈ ಕೇಂದ್ರಗಳಲ್ಲಿ ಒಂದು ಔಷಧಾಲಯ ಮತ್ತು ರೋಗಿಗಳನ್ನು ಶುಶ್ರೂಷೆ ಮಾಡಲು 6 ಹಾಸಿಗೆಗಳುಳ್ಳ 1 ಚಿಕ್ಕ ವಾರ್ಡ್ ಸಹ ಇರುತ್ತದೆ. ಕ್ರಮೇಣ 10 ಸಾವಿರ ಪ್ರಜಾಸಂಖ್ಯೆಗೆ ಇಂತಹ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಸ್ಥಾಪಿಸುವುದು ಕೇಂದ್ರ ಸರ್ಕಾರದ ಗುರಿಯಾಗಿದೆ. ಇವುಗಳ ಅಭಿವೃದ್ಧಿಗೆ ಅಮೆರಿಕಾ 10.55 ಕೋಟಿ ರೂ. ಸಹಾಯ ಧನವನ್ನೂ ಮತ್ತು 2 ಕೋಟಿ ರೂ. ಸಾಲವನ್ನೂ ಒದಗಿಸಿದೆ.

## ಕುಟುಂಬ ಯೋಜನೆಯ ಕಾರ್ಯಕ್ರಮಗಳಿಗೆ ಅಮೆರಿಕಾದ ಆರ್ಥಿಕ ನೆರವು

ಕುಟುಂಬ ಯೋಜನೆಯನ್ನು ಯಶಸ್ವಿಯಾಗಿ ಕೈಗೊಂಡು ಜನಸಂಖ್ಯೆಯನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ಆದ್ಯಕರ್ತವ್ಯ ಎಂದು ಇಂಡಿಯಾ ಭಾವಿಸಿದೆ. ಇದಕ್ಕಾಗಿ ವಿವಿಧ ರೂಪಗಳಲ್ಲಿ ಅಮೆರಿಕಾದ ಆರ್ಥಿಕ ನೆರವು ಪಡೆದಿದೆ.

ಜನಸಂಖ್ಯೆಯ ಬೆಳವಣಿಗೆ ಮತ್ತು ಅದರ ಪರಿಣಾಮಗಳನ್ನು ಕುರಿತು ಅಧ್ಯಯನ ನಡೆಸುವುದರಲ್ಲಿ ಮತ್ತು

ಸಂಶೋಧನೆ ನಡೆಸುವುದರಲ್ಲಿ ಅಮೆರಿಕಾ ಇಂಡಿಯಾಕ್ಕೆ ಸಹಾಯ ಮಾಡಿದೆ. ಮುಂಬಯಿಯಲ್ಲಿರುವ ಚೆಂಬೂರಿನಲ್ಲಿ ಜನಸಂಖ್ಯೆಯ ಸಮಸ್ಯೆಗಳನ್ನು ಕುರಿತು ಸಂಶೋಧನೆ ನಡೆಸುವ ಕೇಂದ್ರವಿದೆ. ಈ ಕೇಂದ್ರದಲ್ಲಿರುವ ಅಧಿಕಾರಿಗಳಿಗೆ ತಾಂತ್ರಿಕ ಸಹಾಯವನ್ನು ಅಮೆರಿಕಾದ ವಿಜ್ಞಾನಿಗಳು ಒದಗಿಸುತ್ತಿದ್ದಾರೆ. ಜನಸಂಖ್ಯೆಗೆ ಸಂಬಂಧಿಸಿದ ಹಾಗೆ ಅಂಕಿ-ಅಂಶಗಳನ್ನು ಸರಿಯಾಗಿ ಕ್ರೋಢೀಕರಿಸಿ ಅವುಗಳ ಉಪಯೋಗವನ್ನು ಯಾವ ರೀತಿ ಪಡೆಯಬೇಕೆಂಬುದರ ಬಗ್ಗೆ ಇಲ್ಲಿ ತರಬೇತಿ ಕೊಡಲಾಗುತ್ತಿದೆ. ಕುಟುಂಬ ಯೋಜನೆ ಕೇಂದ್ರಗಳಲ್ಲಿ ಬಳಸುವ ಅನೇಕ ರೀತಿಯ ಉಪಕರಣಗಳನ್ನು ಅಮೆರಿಕ ಒದಗಿಸಿದೆ. ಚಲನಚಿತ್ರ ಪ್ರದರ್ಶನಗಳನ್ನು ನಡೆಸಲು ಬೇಕಾಗುವ ಯಂತ್ರಗಳು, ದಾದಿಯರಿಗೆ ಬೇಕಾಗುವ ಉಪಕರಣಗಳು, ಧ್ವನಿವರ್ಧಕ ಯಂತ್ರಗಳು ಮತ್ತು ಮೋಟಾರು ವಾಹನಗಳನ್ನು ಕುಟುಂಬ ಯೋಜನೆ ಕೇಂದ್ರಗಳಿಗೆ ಒದಗಿಸಿದೆ.

ಕುಟುಂಬ ಯೋಜನಾ ಕೇಂದ್ರಗಳ ಅವಶ್ಯಕತೆಯನ್ನು ಪೂರೈಸಲು ಮೋಟಾರು ವಾಹನಗಳನ್ನು ಕೊಳ್ಳಬೇಕಾಗಿದೆ. ಮೊದಲು ಅಮೆರಿಕಾ ೭ ಕೋಟಿ ರೂ. ಸಾಲ ಕೊಟ್ಟು, ಮೋಟಾರು ವಾಹನಗಳನ್ನು ಕೊಳ್ಳಲು ಅನುಕೂಲ ಮಾಡಿಕೊಟ್ಟಿತು. 1969ರಲ್ಲಿ 6 ಕೋಟಿ ರೂ. ಸಹಾಯ ಧನವನ್ನು ಕೊಟ್ಟು 1540 ಮೋಟಾರು ವಾಹನಗಳನ್ನು ಕೊಳ್ಳುವುದಕ್ಕೆ ಸಹಾಯ ಮಾಡಿತು. ಈ ವಾಹನಗಳಲ್ಲಿ ಚಲಿಸುವ ಆಸ್ಪತ್ರೆಗಳನ್ನು ಅಳವಡಿಸಿ

ಕೊಂಡು ಅವುಗಳ ಮೂಲಕ ಗ್ರಾಮಾಂತರ ಪ್ರದೇಶಗಳಲ್ಲಿ ಕುಟುಂಬ ಯೋಜನೆಗೆ ಸಂಬಂಧಪಟ್ಟ ಶಸ್ತ್ರಚಿಕಿತ್ಸೆಗಳನ್ನು ನಡೆಸಲು ಏರ್ಪಾಡು ಮಾಡಲಾಗಿದೆ.

"ನಿರೋಧ್" ತಯಾರಿಕೆಗೆ ಪ್ರೋತ್ಸಾಹ ನೀಡಲು ಅಮೆರಿಕಾ 2.25 ಕೋಟಿ ರೂ. ಸಹಾಯಧನ ನೀಡಿದೆ. ಇದಲ್ಲದೆ ವಿವಿಧ ರೀತಿಯ ಗರ್ಭನಿರೋಧಕ ಸಾಧನಗಳನ್ನು ಬಹಳ ಕಡಿಮೆ ದರದಲ್ಲಿ ಮತ್ತು ಅನೇಕ ವೇಳೆ ದಾನದ ರೂಪದಲ್ಲಿ ಇಂಡಿಯಾಕ್ಕೆ ಒದಗಿಸುತ್ತಿದೆ.

# ೮. ಅಮೆರಿಕ ಆರ್ಥಿಕ ಸಹಾಯದ ಪರಿಣಾಮಗಳು

ಹಿಂದಿನ ಅಧ್ಯಾಯಗಳಲ್ಲಿ ಅಮೆರಿಕ ಆರ್ಥಿಕ ಸಹಾಯ ಕೊಡುವುದರ ಮತ್ತು ಇಂಡಿಯಾ ಆರ್ಥಿಕ ನೆರವು ಪಡೆಯುತ್ತಿರುವುದರ ಉದ್ದೇಶಗಳೇನು ಎಂಬುದನ್ನು ಕುರಿತು ಚರ್ಚಿಸಿದ್ದೇವೆ. ಇದಲ್ಲದೆ ಇಂಡಿಯಾ ದೇಶದ ವ್ಯವಸಾಯ, ಕೈಗಾರಿಕೆಗಳು, ವಿದ್ಯಾಭ್ಯಾಸ ಮತ್ತು ಸಾರ್ವಜನಿಕ ಆರೋಗ್ಯಾಭಿವೃದ್ಧಿಗಾಗಿ ಯಾವ ರೀತಿ ಅಮೆರಿಕಾದಿಂದ ನೆರವು ದೊರೆತಿವೆ ಎಂಬುವನ್ನು ಕುರಿತು ಅಧ್ಯಯನ ಮಾಡಿದ್ದೇವೆ. ಆದರೆ ಅನೇಕ ಅಮೆರಿಕನ್ ರಾಜಕೀಯ ನಾಯಕರುಗಳು, ವಿದ್ವಾಂಸರುಗಳು, ಅರ್ಥಶಾಸ್ತ್ರಜ್ಞರು ಮತ್ತು ವಾಣಿಜ್ಯೋದ್ಯೋಮಿಗಳು ಅಮೆರಿಕನ್ ಆರ್ಥಿಕ ಸಹಾಯವನ್ನು ಕುರಿತು ಬಹಳವಾಗಿ ಟೀಕಿಸಿದ್ದಾರೆ. ಇಂಡಿಯಾ ದೇಶಕ್ಕೆ ಇದುವರೆಗೆ ಕೊಡಲ್ಪಟ್ಟ ಆರ್ಥಿಕ ನೆರವು ಸರಿಯಾಗಿ ಉಪಯೋಗಿಸಲ್ಪಟ್ಟಿಲ್ಲವೆಂದೂ ಮತ್ತು ಇದರಿಂದ ಇಂಡಿಯಾಕ್ಕಾಗಲೀ ಅಥವಾ ಅಮೆರಿಕಾಕ್ಕೆಯಾಗಲೀ ಯಾವ ಉಪಯೋಗವೂ ಆಗಿಲ್ಲವೆಂದು ಅನೇಕರು ಟೀಕಿಸಿದ್ದಾರೆ. ಆದುದರಿಂದ ಅಮೆರಿಕಾ ಕೊಡುತ್ತಿರುವ ಸಹಾಯವನ್ನು ನಿಲ್ಲಿಸಬೇಕೆಂದು ಅನೇಕರು ವಾದಿಸಿದ್ದಾರೆ. ಎಷ್ಟರ ಮಟ್ಟಿಗೆ ಇವರುಗಳು ಮಾಡಿರುವ ಟೀಕೆಗಳಲ್ಲಿ ಸತ್ಯಾಂಶವಿದೆ ಎಂಬುದನ್ನು ಕುರಿತು ಚರ್ಚಿಸಿದರೆ ಆಗ ಅಮೆರಿಕದ ಆರ್ಥಿಕ ನೆರವಿಂದ ಪ್ರಯೋಜನವಾಗಿದೆಯೆ ಅಥವಾ

ಇಲ್ಲವೆ ಎಂಬುದರ ವಿಷಯವಾಗಿ ನಾವು ತೀರ್ಮಾನಕ್ಕೆ ಬರಬಹುದು.

ಹೆನ್ರಿ ಹ್ಯಾಜ್‌ಲಿಟ್ಟ್ ಎಂಬ ಪ್ರಸಿದ್ಧ ಬರಹಗಾರರು ಮತ್ತು ಪತ್ರಿಕೋದ್ಯಮಿಗಳು ಈ ಕೆಳಗೆ ಕಂಡಂತೆ ಅಮೆರಿಕಾ ಆರ್ಥಿಕ ಸಹಾಯವನ್ನು ಕುರಿತು ಟೀಕಿಸಿದ್ದಾರೆ.

"ಇಂಡಿಯಾ ಮತ್ತು ಇತರ ದೇಶಗಳಿಗೆ ಆರ್ಥಿಕ ಸಹಾಯವನ್ನು ಕೊಡುವುದಕ್ಕಾಗಿ ಅಮೆರಿಕನ್ ಸರ್ಕಾರ ಕಳೆದ 20 ವರ್ಷಗಳಿಂದ ಅನೇಕ ರೀತಿಯ ವಾದಗಳನ್ನು ಮುಂದೊಡ್ಡಿದೆ. ಹಿಂದುಳಿದ ದೇಶಗಳಿಗೆ ಆರ್ಥಿಕ ನೆರವು ಕೊಡುವುದರ ಮೂಲಕ ಅವುಗಳ ಸ್ನೇಹವನ್ನು ಗಳಿಸಬಹುದು, ಆ ದೇಶಗಳಲ್ಲಿ ಕಮ್ಯುನಿಸ್ಟ್ ಪ್ರಭಾವ ತಡೆಗಟ್ಟಬಹುದು ಮತ್ತು ಯುದ್ಧಗಳನ್ನು ತಪ್ಪಿಸಬಹುದು ಎಂಬುದು ಅಮೆರಿಕಾದ ಒಂದು ಪ್ರಮುಖ ವಾದ. ಆದರೆ ಇದೊಂದೂ ಫಲಿಸಿಲ್ಲ ಎಂದು ಆ ದೇಶಗಳಲ್ಲಿ ನಡೆಯುತ್ತಿರುವ ಘಟನೆಗಳನ್ನು ನೋಡಿ ಹೇಳಬಹುದು. ಇಂಡಿಯಾದಲ್ಲಿಯ ಘೋರಕ್ಷಾಮವನ್ನು ನೋಡಿದರೆ ಅದರ ದುಃಸ್ಥಿತಿ ತಿಳಿದುಬರುತ್ತದೆ. ಇಂತಹ ಪರಿಸ್ಥಿತಿಗೆ ಇಂಡಿಯಾದ ಸಮಾಜವಾದಿ ಧೋರಣೆಗಳೇ ಕಾರಣ. ಇಂಡಿಯಾ ದೇಶದಲ್ಲಿ ಜಾರಿಯಲ್ಲಿರುವ ಆಹಾರಧಾನ್ಯಗಳ ಮೇಲಿನ ಹತೋಟಿ ಮತ್ತು ಬೃಹತ್ ಕೈಗಾರಿಕಾಕರಣ ನೀತಿಯನ್ನು ತೆಗೆದುಹಾಕಿದ ಹೊರತು ಆ ದೇಶದ ಪ್ರಗತಿಯಾಗುವುದಿಲ್ಲ. ನಾವು ಅವರಿಗೆ ಆಹಾರಧಾನ್ಯ

ಗಳ ಸರಬರಾಜು ಮೂಲಕ ಕೊಡುತ್ತಿರುವ ಸಹಾಯ ಸಂಪೂರ್ಣವಾಗಿ ವ್ಯರ್ಥ ಎಂದು ಹೇಳಬಹುದು. ನಾವು ಒಂದೇಸಮನೆ ನೆರವು ಕೊಡುತ್ತಿರುವುದರಿಂದ ಇಂಡಿಯಾದವರಿಗೆ ತಮ್ಮ ಆಹಾರ ಧಾನ್ಯಗಳ ಉತ್ಪಾದನೆಯಲ್ಲಿ ಪ್ರಗತಿ ಸಾಧಿಸುವುದಕ್ಕೆ ಉತ್ತೇಜನವಿಲ್ಲದಂತಾಗಿದೆ ಎಂಬುವನ್ನು ಅಮೆರಿಕನ್ ಸರ್ಕಾರ ತಿಳಿದುಕೊಳ್ಳಲು ಇಷ್ಟಪಡುತ್ತಿಲ್ಲ. [21]

ಮತ್ತೊಂದು ಲೇಖನದಲ್ಲಿ ಹ್ಯಾಜ್‌ಲಿಟ್‌ರವರು ಈ ಕೆಳಗೆ ಕಂಡಂತೆ ಅಭಿಪ್ರಾಯ ಸೂಚಿಸಿದ್ದಾರೆ:— "ಯಾವ ದೇಶಗಳಲ್ಲಿ ಧಾರಾಳ ಉದ್ಯಮ ನೀತಿತತ್ವವನ್ನು ಅನುಸರಿಸಲಾಗುತ್ತಿದೆಯೋ (free enterprise) ಅಂತಹ ದೇಶಗಳಲ್ಲಿ ಅಮೆರಿಕಾದ ಆರ್ಥಿಕ ಸಹಾಯ ಒಳ್ಳೆಯ ಪರಿಣಾಮ ಉಂಟುಮಾಡಿದೆ. ಆದರೆ ಇಂಡಿಯಾದಲ್ಲಿ ಅಮೆರಿಕಾದ ಆರ್ಥಿಕ ಸಹಾಯ ಸಮತಾವಾದಿ ತತ್ವಗಳ ಪ್ರತಿಪಾದನೆಗೆ ಉತ್ತೇಜನ ನೀಡಿ ಆ ದೇಶದ ಬಡತನ ಮತ್ತು ಕ್ಷಾಮ ಮುಂದುವರಿದುಕೊಂಡು ಹೋಗುವಂತೆ ಮಾಡಿದೆ." [22]

---

[21] ಹ್ಯಾಜಲಿಟ್ : "ಅಮೆರಿಕಾವು ಪ್ರಪಂಚಕ್ಕೆಲ್ಲಾ ಅನ್ನಹಾಕಬಲ್ಲದೆ?" ಸೆಂಟ್ ಲೂಯಿ ಗ್ಲೋಬ್ ಡೆಮೋಕ್ರಾಟ್ ಪತ್ರಿಕೆ ಜುಲೈ 3, 1967. ಪು. 12

[22] "ವಿದೇಶಿ ನೆರವಿನ ದಿವಾಳಿತನ" ಸೆಂಟ್‌ಲೂಯಿಗ್ಲೋಬ್ ಡೆಮೋಕ್ರಾಟ್ ಪತ್ರಿಕೆ ; ಆಗಸ್ಟ್ 18, 1967 ; ಪು 8A

ಚಿಕಾಗೋ ವಿಶ್ವವಿದ್ಯಾನಿಲಯದ ಅರ್ಥಶಾಸ್ತ್ರದ ಪ್ರಾಧ್ಯಾಪಕ ಮಿಲ್ಟನ್ ಫ್ರೀಡ್‌ಮನ್‌ರವರು ವಿದೇಶಿ ಆರ್ಥಿಕ ಸಹಾಯದ ವಿಷಯವಾಗಿ ಹೀಗೆ ಹೇಳಿದ್ದಾರೆ:— "ವಿದೇಶಿ ಆರ್ಥಿಕ ನೆರವು ನೀಡುವುದರಿಂದ ತಾತ್ಕಾಲಿಕವಾಗಿ ಅಮೆರಿಕಾ ಕೆಲವು ಮಿತ್ರರನ್ನು ಪಡೆಯಬಹುದು. ಆದರೆ ಧೀರ್ಘಾವಧಿಯಲ್ಲಿ ಅಮೆರಿಕದ ನೆರವು ಹಿಂದುಳಿದ ದೇಶಗಳ ಆರ್ಥಿಕ ಅಭಿವೃದ್ಧಿಯನ್ನು ಕುಂಟಿತಗೊಳಿಸುತ್ತದೆ ಮತ್ತು ಆ ದೇಶಗಳಲ್ಲಿ ಕಮ್ಯುನಿಸ್ಟ್ ಪ್ರಭಾವ ಹರಡಲು ಉತ್ತೇಜನ ಕೊಡುತ್ತದೆ. ಹೀಗೆ ನಾವು ಕೊಟ್ಟ ನೆರವು ನಮ್ಮ ಶತ್ರುಗಳ ಕೈಗೆ ಹೋಗುತ್ತಿದೆ. ಆದುದರಿಂದ ವಿದೇಶಿ ಆರ್ಥಿಕ ನೆರವನ್ನು ತೊಡೆದುಹಾಕಬೇಕು."[23]

ಡಾ|| ರೇಮಾಂಡ್ ಈವೆಲ್‌ರವರು (ನ್ಯೂಯಾರ್ಕ್ ವಿಶ್ವವಿದ್ಯಾನಿಲಯದ ಸಂಶೋಧನಾ ವಿಭಾಗದ ಉಪಾಧ್ಯಕ್ಷರು) ಅಮೆರಿಕಾದ ಪ್ರಜಾಪ್ರತಿನಿಧಿ ಸಭೆಯ ವ್ಯವಸಾಯ ಉಪಸಮಿತಿಯ ಮುಂದೆ 1966 ರಲ್ಲಿ ಹೇಳಿಕೆ ಕೊಡುತ್ತಾ ಹೀಗೆ ತಿಳಿಸಿದ್ದಾರೆ: "1960 ರಿಂದ ಏಷ್ಯಾ ಖಂಡದ ದೇಶಗಳಲ್ಲಿ ತಲಾವಾರು ಆಹಾರ ಉತ್ಪನ್ನ ಕಡಿಮೆಯಾಗುತ್ತಿದೆ. ಇಂಡಿಯಾದಲ್ಲಂತೂ 1966 ರಲ್ಲಿ ಆಹಾರ ಪರಿಸ್ಥಿತಿ ವಿಷಮ ಪರಿಸ್ಥಿತಿಯನ್ನು

---

[23] ಫ್ರೀಡ್‌ಮನ್: "ವಿದೇಶಿ ಆರ್ಥಿಕ ನೆರವು"—ಏಲ್‌ರಿವ್ಯೂ, 1957–58; ಪು. 501

ತಲುಪಿತು. ಅಮೆರಿಕಾದ ಸಹಾಯ ಇಂಡಿಯಾವನ್ನು ವಿಷಮ ಪರಿಸ್ಥಿತಿಯಿಂದ ಪಾರುಮಾಡಿತು. ಆದರೆ ಮುಂದಿನ 15 ವರ್ಷಗಳಲ್ಲಿ ಇಂಡಿಯಾದ ಜನಸಂಖ್ಯೆ ಇನ್ನೂ 20 ಕೋಟಿಯಷ್ಟು ಹೆಚ್ಚಾಗುತ್ತದೆ. ಇಂಡಿಯಾ ತನ್ನ ಆಹಾರ ಉತ್ಪನ್ನವನ್ನು ಹೆಚ್ಚಿಸಿಕೊಂಡು ಪ್ರಜಾ ಸಂಖ್ಯೆಯನ್ನು ಮಿತಿಗೊಳಿಸಿಕೊಳ್ಳದೆ ಹೋದರೆ ಅದು ತನ್ನ ಪ್ರಜೆಗಳಿಗೆ ಅನ್ನ ಒದಗಿಸಲಾರದ ಪರಿಸ್ಥಿತಿಯನ್ನು ಮುಟ್ಟುತ್ತದೆ." [24]

ಅಂತರರಾಷ್ಟ್ರೀಯ ಆರ್ಥಿಕ ನೀತಿಯನ್ನು ರೂಪಿಸುವ ಸಂಘದ ಅಧ್ಯಕ್ಷರಾದ ಡಾ. ಎನ್. ಆರ್. ಡೇನಿಲಿಯನ್ ರವರು ಇಂಡಿಯಾವನ್ನು ಕುರಿತು ಹೀಗೆ ಟೀಕಿಸಿದ್ದಾರೆ. "ಬೃಹತ್ ಪ್ರಮಾಣದ ವಿದೇಶಿ ಸಹಾಯವನ್ನು ಇಂಡಿಯಾಕ್ಕೆ ಒದಗಿಸಿಕೊಟ್ಟರೂ ಅದು ತನ್ನ ಜನರ ಸ್ಥಿತಿ ಗತಿಗಳನ್ನು ಉತ್ತಮಪಡಿಸಲು ಸಾಧ್ಯವಾಗಿಲ್ಲ ಎಂಬು ದನ್ನು ನೋಡಿದರೆ ಸಮತಾವಾದ ತತ್ತ್ವದ ಮೇಲೆ ಆರ್ಥಿಕ ಯೋಜನೆಯನ್ನು ರೂಪಿಸಿದರೆ ಎಂತಹ ದುಷ್ಪರಿಣಾಮ ವಾಗುತ್ತದೆ ಎಂಬುದು ಇಂಡಿಯಾದ ಉದಾಹರಣೆಯಿಂದ ಎದ್ದು ಕಾಣುತ್ತದೆ. ಆಹಾರ ಧಾನ್ಯಗಳ ಉತ್ಪನ್ನವನ್ನು ಅಧಿಕ ಗೊಳಿಸುವುದು ತಮ್ಮ ಪ್ರಮುಖ ಕರ್ತವ್ಯ ಎಂಬು

---

[24] "ವಿದೇಶಿ ಆರ್ಥಿಕ ನೆರವನ್ನು ಸಮರ್ಥಿಸುವವರಿಗೆ ಪ್ರತಿ ಭಟನೆ"—ಚಿಕಾಗೋ ಟ್ರಿಬ್ಯೂನ್ ಪತ್ರಿಕೆ; ನವಂಬರ್ 14, 1966, ಪು. 2.

ದನ್ನು ತಿಳಿದುಕೊಳ್ಳದೆ ಇಂಡಿಯಾದ ಸಮತಾವಾದಿ ಆರ್ಥಿಕ ಯೋಜನೆಯನ್ನು ರೂಪಿಸಿದವರು ಕೈಗಾರಿಕಾಭಿವೃದ್ಧಿ ಕಡೆಗೆ ಪ್ರಮುಖ ಗಮನವಿತ್ತರು. ಆದುದರಿಂದ ಇಂಡಿಯಾ ಇಂತಹ ದುಸ್ಥಿತಿಯನ್ನು ಅನುಭವಿಸುತ್ತಿದೆ.''[25]

ಇಂಡಿಯಾಕ್ಕೆ ಆರ್ಥಿಕ ನೆರವು ಕೊಡುತ್ತಿರುವ ವಿಷಯವಾಗಿ ಮಾತನಾಡುತ್ತ ಸೆನೆಟರ್ ಜಾನ್ ಜೆ. ವಿಲಿಯಂಸ್‌ರವರು ಹೀಗೆ ಟೀಕೆ ಮಾಡಿದ್ದಾರೆ:

''ಇಂಡಿಯಾವು ಇದುವರೆಗೆ 7 ಶತಕೋಟಿ ಡಾಲರುಗಳ ಮೊತ್ತದಷ್ಟು ನೆರವನ್ನು ಅಮೆರಿಕಾದಿಂದ ಪಡೆದಿದೆ. ಆದಾಗ್ಯೂ ಇಂಡಿಯಾದ ಪ್ರಧಾನಿ ಇಂದಿರಾಗಾಂಧಿಯವರು, ಈಜಿಪ್ಟ್‌ನ ನಾಸೆರ್ ಮತ್ತು ಯುಗೋಸ್ಲಾವಿಯಾದ ಟಿಟೋರವರೊಡನೆ ಸೇರಿಕೊಂಡು ವಿಯಟ್‌ನಾಂ ನೀತಿ ವಿಷಯದಲ್ಲಿ ಅಮೆರಿಕಾವನ್ನು ಖಂಡಿಸಿದ್ದಾರೆ. ಆದುದರಿಂದ ಅಮೆರಿಕಾವು ಇಂಡಿಯಾದ ಬೆಂಬಲವನ್ನು ಗಳಿಸುವುದರಲ್ಲಿ ನಿಸ್ಸಹಾಯಕವಾಗಿದೆ. ಆದುದರಿಂದ ಇಂಡಿಯಾಕ್ಕೆ ಕೊಡುತ್ತಿರುವ ಸಹಾಯವನ್ನು ನಿಲ್ಲಿಸಬೇಕೆಂದು ವಾದಿಸಿದ್ದಾರೆ.[26]

---

[25] ಇದೇ ಸಂದರ್ಭದಲ್ಲಿ: ಚಿಕಾಗೋ ಟ್ರಿಬ್ಯೂನ್ ಪತ್ರಿಕೆ ನವಂಬರ್ 15, 1966, ಪು. 2.

[26] ಇದೇ ಸಂದರ್ಭದಲ್ಲಿ. ಚಿಕಾಗೋ ಟ್ರಿಬ್ಯೂನ್ ಪತ್ರಿಕೆ ನವಂಬರ್ 14, 1966, ಪುಟ. 2.

ಅಮೆರಿಕಾದ ಪ್ರಜಾಪ್ರತಿನಿಧಿ ಸಭೆಯ ಸದಸ್ಯ ಹೆಚ್. ಆರ್. ಗ್ರಾಸ್‌ರವರು 1966ರಲ್ಲಿ ಪ್ರತಿನಿಧಿ ಸಭೆ ಮುಂದೆ ಮಾತನಾಡುತ್ತಾ ಅಮೆರಿಕಾದ ಆರ್ಥಿಕ ನೆರವನ್ನು ಖಂಡಿಸಿದ್ದಾರೆ.

"ಈ ಇಂಡಿಯಾ ದೇಶಕ್ಕೆ ಅಮೆರಿಕವು ಪ್ರತಿವರ್ಷವೂ ನೂರಾರು ಲಕ್ಷ ಡಾಲರುಗಳನ್ನು ಸುರಿಯುತ್ತಿದೆ. ಅದರೆ ಪ್ರಧಾನಿ ಇಂದಿರಾ ಗಾಂಧಿ ಮತ್ತು ಸರ್ವಾಧಿಕಾರಿ ಟಿಟೋರವರು ಜಂಟಿ ಹೇಳಿಕೆಯನ್ನಿತ್ತು ತಮ್ಮ ದೇಶಗಳು ತಟಸ್ಥ ನೀತಿಗೆ ಬದ್ಧವಾಗಿರುವುದಾಗಿ ಘೋಷಿಸಿದ್ದಾರೆ. ಆದರೆ ಚೈನಾದೇಶವು ಇಂಡಿಯಾದ ಮೇಲೆ ಆಕ್ರಮಣ ಮಾಡಿದಾಗ ಅಪಾಯದಿಂದ ಪಾರಾಗಲು ಮತ್ತು ತಮ್ಮ ಮರ್ಯಾದೆ ಉಳಿಸಿಕೊಳ್ಳಲು ಇಂಡಿಯಾ ಸರ್ಕಾರದ ನಾಯಕರುಗಳು ಮಕ್ಕಳಂತೆ ತೆವಳುತ್ತಾ ಬಂದು ತಮ್ಮ ರಕ್ಷಣೆಗೆ ಬರಬೇಕೆಂದು ಅಮೆರಿಕಾವನ್ನು ಬೇಡಿಕೊಂಡರು. ಜೊತೆಗೆ ಟಿಟೋ ಆಗಲಿ ಅಥವ ಇಂದಿರಾಗಾಂಧಿಯಾಗಲೀ ಅಮೆರಿಕಾದ ನಾಗರಿಕರಿಂದ ಹಣ ಕಸಿದುಕೊಳ್ಳುವಾಗ ತಟಸ್ಥರಾಗಿರುವುದಿಲ್ಲ. ಅಮೆರಿಕಾದ ಶಾಸನಸಭಾ ಸದಸ್ಯರುಗಳ ಮೂಲಕ ಎಲ್ಲಾ ಯತ್ನ ಮಾಡಿ ತಮಗೆ ಬೇಕಾದ ಹಣ ಕಸಿದುಕೊಳ್ಳುತ್ತಾರೆ."[27]

---

[27] ಅಮೆರಿಕಾದ ಶಾಸನ ಸಭೆಗಳ ಚುನಾವಣೆ—ಕಾಮರ್ಸ್ ವಾರಪತ್ರಿಕೆ, ಮುಂಬಯಿ; ಡಿಸೆಂಬರ್ 3, 1966.

ಅಮೆರಿಕಾದ ಸೆನೆಟ್ ಸಭೆಯ ಸದಸ್ಯ ಸ್ಟೂಅರ್ಟ್ ಸ್ಟೈಮಿಂಗ್‌ಟನ್‌ರವರು ಅನೇಕ ವೇಳೆ ಇಂಡಿಯಾಕ್ಕೆ ಒದಗಿಸಿರುವ ಸಹಾಯವನ್ನು ಕುರಿತು ಪ್ರಶ್ನಿಸಿದ್ದಾರೆ. ಇಂಡಿಯಾವು ಅಮೆರಿಕಾದಿಂದ ಪಡೆದ ಸಹಾಯವನ್ನು ತನ್ನ ಆರ್ಥಿಕ ಅಭಿವೃದ್ಧಿಗೆ ಉಪಯೋಗಿಸದೆ ಕಮ್ಯುನಿಸ್ಟ್ ರಾಷ್ಟ್ರದಿಂದ ತನ್ನ ರಕ್ಷಣಾ ವ್ಯವಸ್ಥೆಗೆ ಬೇಕಾದ ಯುದ್ಧ ಸಾಮಗ್ರಿಗಳನ್ನು ಕೊಳ್ಳಲು ಉಪಯೋಗಿಸುತ್ತಿದೆ ಎಂದು ಟೀಕಿಸಿದ್ದಾರೆ. ಆದುದರಿಂದ ಪ್ರತಿಯೊಬ್ಬ ಅಮೆರಿಕನ್ ಪ್ರಜೆಗೂ ಇಂಡಿಯಾಕ್ಕೆ ಕೊಡುತ್ತಿರುವ ಲಕ್ಷಾಂತರ ಡಾಲರು ಸಹಾಯವನ್ನು ಕುರಿತು ಪ್ರಶ್ನಿಸುವ ಅಧಿಕಾರ ವಿದೆ ಎಂದು ಹೇಳಿದ್ದಾರೆ.[28]

ಮೇಲೆ ನಮೂದಿಸಿರುವ ಟೀಕೆಗಳನ್ನು ವಿಮರ್ಶೆ ಮಾಡಿದರೆ ಅವುಗಳನ್ನು 4 ಗುಂಪುಗಳನ್ನಾಗಿ ವಿಂಗಡಿಸ ಬಹುದು :

1. ಇಂಡಿಯಾವು ವ್ಯವಸಾಯ ಅಭಿವೃದ್ಧಿಯನ್ನು ಕಡೆಗಣಿಸುವಂತೆ ಮಾಡಿದೆ.
2. ಇಂಡಿಯಾವು ತನ್ನ ಸ್ಥಿತಿಗೆ ಅನುಸಾರವಾಗಿ ಆರ್ಥಿಕ ಯೋಜನೆಯನ್ನು ರೂಪಿಸಿಕೊಳ್ಳು ವುದರ ಬದಲು ಬೇರೆ ದೇಶಗಳನ್ನು ಅನು ಕರಣೆ ಮಾಡಿ ಸಮತಾವಾದಿ ತತ್ತ್ವದ

---

[28] ಸೇಂಟ್ ಲೂಯಿ ಪೋಸ್ಟ್ ಡಿಸ್‌ಪ್ಯಾಚ್ ಪತ್ರಿಕೆ ಆಗಸ್ಟ್, 1967. ಪು. 6 A

ಆಧಾರದ ಮೇಲೆ ಕೇಂದ್ರೀಕೃತವಾದ ಯೋಜನೆಯನ್ನು ಪಾಲಿಸಿಕೊಂಡು ಬರುವಂತೆ ಮಾಡಿದೆ.

3. ಜನಸಂಖ್ಯೆಯ ನಿಯಂತ್ರಣಕ್ಕೆ ಗಮನಕೊಡದಂತೆ ಮಾಡಿದೆ.

4. ತಾನು ಪಡೆದ ಸಹಾಯಕ್ಕೆ ಪ್ರತಿಯಾಗಿ ಅಮೆರಿಕಾದ ನೀತಿಗಳನ್ನು ಸಮರ್ಥಿಸುವುದರ ಬದಲು ಅಮೆರಿಕಾವನ್ನೇ ಟೀಕಿಸುವಂತೆ ಮಾಡಿದೆ.

ನಾವು ಮೇಲ್ಕಂಡ ಟೀಕೆಗಳನ್ನು ಅಮೆರಿಕಾ-ಇಂಡಿಯಾ ಆರ್ಥಿಕ ನೆರವಿನ ಉದ್ದೇಶಗಳ ಮತ್ತು ಇಂಡಿಯಾದಲ್ಲಿರುವ ವಾಸ್ತುಸ್ಥಿತಿಯ ಹಿನ್ನೆಲೆಯಲ್ಲಿ ಪರಿಶೀಲಿಸಿದರೆ, ಅಮೆರಿಕನರು ಮಾಡಿರುವ ಆರೋಪಣೆಗಳಲ್ಲಿ ಹುರುಳಿಲ್ಲ ಎಂದು ತಿಳಿದುಬರುತ್ತದೆ.

**ಆರೋಪಣೆಗಳಿಗೆ ಉತ್ತರ:**

ಇಂಡಿಯಾವು ವ್ಯವಸಾಯದ ಅಭಿವೃದ್ಧಿಯನ್ನು ಕಡೆಗಾಣಿಸಿದೆ ಎಂಬುದಕ್ಕೆ ಪ್ರತ್ಯುತ್ತರ:

ಯಾವ ದೇಶದಲ್ಲೇ ಆಗಲಿ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸುವಾಗ, ವ್ಯವಸಾಯ ಅಥವ ಕೈಗಾರಿಕೆಗಳ ಅಥವ ಇತರ ಅಭಿವೃದ್ಧಿ ಕಾರ್ಯಗಳ ಪೈಕಿ ಯಾವುದಕ್ಕೆ ಹೆಚ್ಚಿಗೆ ಪ್ರಾಶಸ್ತ್ಯ ಕೊಡಬೇಕು ಎಂಬುದು ಆಯಾ ದೇಶದ ಸನ್ನಿವೇಶಗಳನ್ನು ಅವಲಂಬಿಸಿದೆ. ಒಂದು ದೇಶವು

ಆರ್ಥಿಕ ಅಭಿವೃದ್ಧಿಯನ್ನು ಸಾಧಿಸಲು ಪ್ರಾರಂಭಿಸಿದಾಗ ಎಂತಹ ಸಮಸ್ಯೆಗಳನ್ನು ಎದುರಿಸುತ್ತಿತ್ತು ಎಂಬುದನ್ನು ಮೊದಲು ಗಮನಿಸಬೇಕು. ಪ್ರಪಂಚದಾದ್ಯಂತ ಆರ್ಥಿಕ ಅಭಿವೃದ್ಧಿ ವಿಷಯವಾಗಿ ಚರ್ಚಿಸುವ ಅರ್ಥಶಾಸ್ತ್ರಜ್ಞರಲ್ಲಿ ಇಂದಿಗೂ ಮೇಲ್ಕಂಡ ವಿಷಯದಲ್ಲಿ ಒಮ್ಮತ ಅಭಿಪ್ರಾಯವಿಲ್ಲ. ಕೆಲವರು ಮೊದಲು ವ್ಯವಸಾಯದ ಅಭಿವೃದ್ಧಿಗೆ ಪ್ರಾಶಸ್ತ್ಯ ಕೊಡಬೇಕೆನ್ನುತ್ತಾರೆ. ಮತ್ತೆ ಕೆಲವರು ಕೈಗಾರಿಕಾಭಿವೃದ್ಧಿಗೆ ಪ್ರಾಶಸ್ತ್ಯ ಕೊಡಬೇಕೆನ್ನುತ್ತಾರೆ. ಇತರರು ಸಾಮಾಜಿಕ ಕಾರ್ಯಗಳ ಪ್ರಗತಿಗೆ ಪ್ರಾಶಸ್ತ್ಯ ಕೊಡಬೇಕೆನ್ನುತ್ತಾರೆ. ಇಂಡಿಯಾದ ಅರ್ಥಶಾಸ್ತ್ರಜ್ಞರಲ್ಲಿ ಕೆಲವರು ಆರ್ಥಿಕ ಯೋಜನೆಯನ್ನು ರೂಪಿಸುವಾಗ ಇಂಡಿಯಾವು ಅನುಭವಿಸುತ್ತಿದ್ದ ಸಮಸ್ಯೆಗಳನ್ನು ಗಮನಕ್ಕೆ ತೆಗೆದುಕೊಂಡು ಮೊದಲನೇ ಪ್ರಾಶಸ್ತ್ಯವನ್ನು ಕೈಗಾರಿಕೆಗಳ, ಸಾರಿಗೆ ಮತ್ತು ಸಂಪರ್ಕ ವ್ಯವಸ್ಥೆಯ ಅಭಿವೃದ್ಧಿಗೆ ಕೊಡಬೇಕೆಂದು ಸೂಚಿಸಿದರು. ಅದರಂತೆ ಇಂಡಿಯಾದ ನಾಯಕರುಗಳು ಯೋಜನೆಯನ್ನು ರೂಪಿಸಿದರು. ಆದರೆ ಇಂಡಿಯಾ ವ್ಯವಸಾಯದ ಅಭಿವೃದ್ಧಿಯನ್ನು ನಿರ್ಲಕ್ಷಿಸಿಲ್ಲ.

ಕಳೆದ 3 ಪಂಚವಾರ್ಷಿಕ ಯೋಜನೆಗಳಲ್ಲಿ ಉಂಟಾಗಿರುವ ವ್ಯವಸಾಯ ಉತ್ಪನ್ನವನ್ನು ಗಮನಿಸಿದರೆ ಇಂಡಿಯಾ ಒಂದೇ ಸಮನೆ ವ್ಯವಸಾಯ ಪ್ರಗತಿಯನ್ನು ಕಾಪಾಡಿಕೊಂಡು ಬಂದಿದೆ ಎಂಬುದು ತಿಳಿದುಬರುತ್ತದೆ. ಈ ಕೆಳಗೆ ನಮೂದಿಸಿರುವ ಪಟ್ಟಿಯನ್ನು ವೀಕ್ಷಿಸಿದಾಗ

ಮೇಲ್ಕಂಡ ಅಂಶ ಸ್ಪಷ್ಟವಾಗುತ್ತದೆ. 15 ವರ್ಷಗಳ ಅವಧಿಯಲ್ಲಿ (1951-1966) ಇಂಡಿಯಾ ಸಾಧಿಸಿದ ಪ್ರಗತಿ, 1965 ಮತ್ತು 1966 ರಲ್ಲಿ ಉಂಟಾದ ಕ್ಷಾಮ ಪರಿಸ್ಥಿತಿಯ ಕಾರಣದಿಂದಾಗಿ, ಪ್ರಪಂಚದ ಇತರ ಜನರಿಗೆ ಗೋಚರವಾಗುತ್ತಿಲ್ಲ.

(ಪಟ್ಟಿ 7ಕ್ಕೆ ಮುಂದಿನ ಪುಟ ನೋಡಿ)

ಎಲ್ಲದಕ್ಕಿಂತಲೂ ಮುಖ್ಯವಾದ ಅಂಶ ಏನೆಂದರೆ ವ್ಯವಸಾಯದ ಪ್ರಗತಿ ದರ 1950-65 ರ ಅವಧಿಯಲ್ಲಿ ಶೇಕಡಾ 3 ರಷ್ಟು ಏರಿತು. (ಸುಮಾರು 200 ವರ್ಷಗಳ ಬ್ರಿಟಿಷ್ ಆಡಳಿತ ಕಾಲದಲ್ಲಿ ವ್ಯವಸಾಯದ ಪ್ರಗತಿ ದರ ಶೇಕಡಾ ಅರ್ಧಕ್ಕಿಂತ ಹೆಚ್ಚಾಗಲಿಲ್ಲ.)

1950 ರಲ್ಲಿ 55 ದಶಲಕ್ಷ ಟನ್ ಆಹಾರ ಧಾನ್ಯ ಉತ್ಪತ್ತಿಯಾಗುತ್ತಿದ್ದು 1964 ರಲ್ಲಿ 88 ದಶಲಕ್ಷ ಟನ್ ಮುಟ್ಟಿತು. (ಅಂದರೆ ಶೇಕಡಾ 60 ರಷ್ಟು ಹೆಚ್ಚಾಯಿತು) 1965 ರಲ್ಲಿ ಕ್ಷಾಮ ಪರಿಸ್ಥಿತಿಯ ಕಾರಣ ಉತ್ಪನ್ನ 72·3 ದಶಲಕ್ಷ ಟನ್‌ಗಳಿಗೆ ಇಳಿಯಿತು ಪುನಃ 1968-69 ರಲ್ಲಿ ಆಹಾರ ಧಾನ್ಯಗಳ ಉತ್ಪನ್ನ 94 ದಶಲಕ್ಷ ಟನ್‌ಗಳನ್ನು ತಲುಪಿದೆ. ತಲಾ ಜನ ಸಂಖ್ಯೆಯ ಆಧಾರದ ಮೇಲೆ 1950-65 ರ ಅವಧಿಯಲ್ಲಿ ಆಹಾರ ಧಾನ್ಯಗಳ ಉತ್ಪನ್ನ ವರ್ಷಕ್ಕೆ 338 ಪೌಂಡ್‌ನಿಂದ 409 ಪೌಂಡುಗಳಿಗೆ ಏರಿತು (ಅಂದರೆ ಶೇಕಡಾ 20 ರಷ್ಟು ಹೆಚ್ಚಾಯಿತು). ಇದೇ ಅವಧಿಯಲ್ಲಿ ಜನ

ಪಟ್ಟಿ 7

## ಇಂಡಿಯಾದಲ್ಲಿ ವ್ಯವಸಾಯ ಉತ್ಪನ್ನ (1950-1965)

(ಕೆಲವು ಆರಿಸಲ್ಪಟ್ಟ ಅವಧಿಗಳಲ್ಲಿ)

| ವ್ಯವಸಾಯ ಉತ್ಪನ್ನದ ಸೂಚಕ ಸಂಖ್ಯೆ | ಪ್ರಮಾಣ | 50-51 | 55-56 | 60-61 | 64-65 |
|---|---|---|---|---|---|
| ಆಹಾರ ಧಾನ್ಯಗಳು | (1949-50=100) | 96 | 117 | 142 | 158 |
| ಆಹಾರ ಧಾನ್ಯಗಳಲ್ಲದೆ ಇತರ ಉತ್ಪನ್ನಗಳು | (1949-50=100) | 91 | 115 | 137 | 149 |
| ಒಟ್ಟು ಉತ್ಪನ್ನ | (1949-50=100) | 106 | 120 | 153 | 175 |
| ಆಹಾರ ಧಾನ್ಯಗಳು | (ದಶಲಕ್ಷ ಟನ್) | 55 | 69 | 82 | 88 |
| ಎಣ್ಣೆ ಬೀಜಗಳು | ,, | 5·1 | 5·6 | 7·0 | 8·3 |

| | | | | | |
|---|---|---|---|---|---|
| ಹತ್ತಿ | (ಸಾವಿರ ಟನ್) | 472 | 725 | 952 | 974 |
| ಸೆಣಬು | ,, | 632 | 806 | 743 | 1084 |
| ಉತ್ಪನ್ನ ಸೂಚಕ ಸಂಖ್ಯೆ ಪ್ರತಿ ಎಕರೆಗೆ | (1949-50=100) | 96 | 102 | 118 | 127 |
| ಭತ್ತ ಸರಾಸರಿ ಉತ್ಪನ್ನ | ಪೌಂಡುಗಳಲ್ಲಿ ಪ್ರತಿ ಎಕರೆಗೆ | 678 | 771 | 893 | 943 |
| ತಲಾ ಜನಸಂಖ್ಯೆಗೆ ಆಹಾರ ಧಾನ್ಯಗಳ ಉತ್ಪನ್ನ | ಪೌಂಡುಗಳಲ್ಲಿ 1 ವರ್ಷಕ್ಕೆ | 338 | 389 | 418 | 409 |
| ತಲಾ ಜನಸಂಖ್ಯೆಗೆ ಆಹಾರ ಧಾನ್ಯಗಳ ಆಮದು | ಪೌಂಡುಗಳಲ್ಲಿ 1 ವರ್ಷಕ್ಕೆ | 13 | 2 | 25 | 29 |

ಆಧಾರ : ಇಂಡಿಯಾ ವರ್ತಮಾನ [ಇಂಡಿಯಾ ರಾಯಭಾರ ಕಚೇರಿ, ವಾಷಿಂಗ್‌ಟನ್]
ಆಗಸ್ಟ್ 11, 1967, ಪು. 4

ಸಂಖ್ಯೆ 12·5 ಕೋಟಿಯಷ್ಟು ಏರಿತು. (ಅಂದರೆ ಶೇಕಡಾ 34·6 ರಷ್ಟು ಏರಿತು.)

ನಾಲ್ಕನೆ ಯೋಜನೆ ಅವಧಿ ಕೊನೆಗೆ (1969-74) ಆಹಾರ ಧಾನ್ಯಗಳ ಉತ್ಪನ್ನವನ್ನು 129 ದಶ ಲಕ್ಷ ಟನ್ ಗಳಿಗೆ ಏರಿಸುವ ನಿರೀಕ್ಷೆ ಇದೆ. ಮೇಲ್ಕಂಡ ಅಂಶಗಳನ್ನು ಗಮನಿಸಿದರೆ ನಿಜವಾಗಿಯೂ ಇಂಡಿಯಾ ವ್ಯವಸಾಯದ ಪ್ರಗತಿಯನ್ನು ಗಮನದಲ್ಲಿ ಇಟ್ಟುಕೊಂಡಿದೆ ಎಂದು ಹೇಳಬಹುದು.

ಅಮೆರಿಕಾದ ರಾಯಭಾರಿಯಾಗಿದ್ದ ಶ್ರೀ ಚೆಸ್ಟರ್ ಬೌಲ್ಸ್‌ರವರು, 1971 ರ ವೇಳೆಗೆ ಇಂಡಿಯಾ ತನ್ನ ಜನರಿಗೆ ಆಹಾರ ಒದಗಿಸಬಲ್ಲದೇ ಎಂಬ ವಿಷಯವನ್ನು ಕುರಿತು ಒಂದು ಅಗ್ರಲೇಖನವನ್ನು ಬರೆದಿದ್ದಾರೆ. ಅದರಲ್ಲಿ ಈ ರೀತಿ ಅಭಿಪ್ರಾಯ ಪಟ್ಟಿದ್ದಾರೆ. ಇತ್ತೀಚೆಗೆ ಇಂಡಿಯಾದಲ್ಲಿ ಉಂಟಾದ ಕ್ಷಾಮ ಮತ್ತು ಅದರ ಪರಿಣಾಮದ ವಿಷಯವಾಗಿ ಪತ್ರಿಕೆಗಳಲ್ಲಿ ದೀರ್ಘ ಲೇಖನಗಳು ಬಂದುದರಿಂದ ಇದುವರೆಗೆ ಇಂಡಿಯಾದ ವ್ಯವಸಾಯದಲ್ಲಿ ಉಂಟಾಗಿರುವ ಕ್ರಾಂತಿ ವಿಷಯ ಅನೇಕ ಜನರ ಗಮನಕ್ಕೆ ಬಂದಿಲ್ಲ. 1966 ರಲ್ಲಿ ಇಂಡಿಯಾದ ರೈತರು 5·5 ದಶ ಲಕ್ಷ ಎಕರೆಗಳಲ್ಲಿ ಅಧಿಕ ಉತ್ಪನ್ನ ಕೊಡುವ ಬೀಜಗಳನ್ನು ಬಿತ್ತಿದರಲ್ಲದೆ ಕೃತಕ ಗೊಬ್ಬರಗಳನ್ನು ಉಪಯೋಗಿಸಿದರು. 1971 ರ ವೇಳೆಗೆ 32 ದಶಲಕ್ಷ ಎಕರೆಗಳಲ್ಲಿ ಈ ರೀತಿಯ ಅಧಿಕ ಉತ್ಪನ್ನಕೊಡುವ ಬೀಜಗಳನ್ನು ಬಿತ್ತಲಾಗುತ್ತದೆ.

ಇನುವರೆಗೆ ವ್ಯವಸಾಯಕ್ಕೆ ಯೋಗ್ಯವಾದ ಒಟ್ಟು ಭೂಮಿಯ ಪೈಕಿ ¼ ಭಾಗವನ್ನು ಭೂಮಿಗೆ ಅಥವ ೮೫ ದಶಲಕ್ಷ ಎಕರೆ ಭೂಮಿಗೆ ನೀರಾವರಿ ಸೌಕರ್ಯ ಒದಗಿಸ ಲ್ಪಟ್ಟಿದೆ. 1971 ರ ವೇಳೆಗೆ ನೀರಾವರಿ ಸೌಕರ್ಯ 111 ದಶಲಕ್ಷ ಎಕರೆಗಳಿಗೆ (ಅಂದರೆ ವ್ಯವಸಾಯಕ್ಕೆ ಯೋಗ್ಯವಾದ ಭೂಮಿ ಪೈಕಿ ಸುಮಾರು ⅓ ಭಾಗ ಭೂಮಿಗೆ) ಒದಗಿಸಲ್ಪಡುತ್ತದೆ. ಈ ಮಧ್ಯೆ ಸಾವಿರಾರು ಬಾವಿಗಳನ್ನು ತೋಡುವ ಕಾರ್ಯ ನಡೆಯುತ್ತಿದೆ. ಸಾಧ್ಯವಾದಷ್ಟು ಬಾವಿಗಳನ್ನು ತೋಡಲು ಇಂಡಿಯಾ ಸರ್ಕಾರ ಬಾವಿ ತೋಡುವ ಯಂತ್ರಗಳನ್ನು ಕೊಂಡಿದೆ. ಕೊಳ್ಳಲು ಆಗದಿದ್ದರೆ ಬಾಡಿಗೆಗೆ ಯಂತ್ರಗಳನ್ನು ತೆಗೆದು ಕೊಂಡು ಜರೂರು ರೀತಿಯಲ್ಲಿ ಬಾವಿಗಳನ್ನು ತೋಡಿ ಸುತ್ತಿದೆ... ನಾನು ಕೇವಲ ಊಹೆ ಮಾಡುವುದಿಲ್ಲ. ಮೊಟ್ಟಮೊದಲ ಬಾರಿಗೆ ಇಂಡಿಯಾದ ಚರಿತ್ರೆಯಲ್ಲಿ ರೈತರು ತಮ್ಮ ಸಂಸಾರಕ್ಕೆ ಬೇಕಾದಷ್ಟು ಬೆಳೆದುಕೊ ಳ್ಳುವ ಬದಲು, ಲಾಭ ಸಂಪಾದಿಸುವ ದೃಷ್ಟಿಯಿಂದ ಅಧಿಕ ಪ್ರಮಾಣದಲ್ಲಿ ಬೆಳೆದು ಮಾರುಕಟ್ಟೆಗಳಿಗೆ ವಸ್ತು ಗಳನ್ನು ಸಾಗಿಸಿ ಮಾರಲು ಪ್ರಾರಂಭಿಸಿದ್ದಾರೆ ಎಂದು ನನ್ನ ಸ್ವಂತ ಅನುಭವದಿಂದ ಸ್ಪಷ್ಟವಾಗಿ ಹೇಳಬಲ್ಲೆ.... ಬಹುಸಂಖ್ಯಾತ ರೈತರು ಒಳ್ಳೆ ಬೀಜಗಳನ್ನು ಉಪಯೋ ಗಿಸಬೇಕೆಂದು, ಕೃತಕ ಗೊಬ್ಬರಗಳನ್ನು ಹಾಕಿ ವ್ಯವ ಸಾಯ ಮಾಡಬೇಕೆಂದು ಮತ್ತು ನೀರಾವರಿಯಿಂದ ದೊರೆಯುವ ನೀರನ್ನು ಸರಿಯಾದ ಪ್ರಮಾಣದಲ್ಲಿ ಉಪ

ಯೋಗಿಸಿಕೊಂಡು ಅಧಿಕ ಫಲ ಪಡೆಯಲು ಕಾತುರರಾಗಿದ್ದಾರೆ. ಇದರ ಪರಿಣಾಮ ಏನೆಂದರೆ, ಇಂಡಿಯಾದ ಸುಮಾರು 5 ಲಕ್ಷ ಹಳ್ಳಿಗಳಲ್ಲಿ ಒಂದು ಕ್ರಾಂತಿ ಪ್ರಾರಂಭವಾಗಿದೆ. ಇಂತಹ ಕ್ರಾಂತಿ ಉಂಟಾಗುತ್ತದೆ ಎಂಬುದನ್ನು ಕೆಲವು ವರ್ಷಗಳ ಹಿಂದೆ ಇಂಡಿಯಾದಲ್ಲಿ ಊಹಿಸಲೂ ಸಾಧ್ಯವಾಗುತ್ತಿರಲಿಲ್ಲ." [29]

ಅಮೆರಿಕಾ ರಾಯಭಾರಿಯವರ ಹೇಳಿಕೆಯು ಅನೇಕ ಅಮೆರಿಕನರ ಟೀಕೆಗಳಿಗೆ ನೇರವಾದ ಉತ್ತರ ಕೊಟ್ಟಿದೆ.

**ಇಂಡಿಯಾ ಸಮತಾವಾದಿ ತತ್ವದ ಮೇಲೆ ರೂಪಿತವಾದ ಆರ್ಥಿಕ ಯೋಜನೆಯನ್ನು ಕಾರ್ಯಗತ ಮಾಡುತ್ತಿರುವುದರಿಂದ ಪರಿಸ್ಥಿತಿ ಹದಗೆಟ್ಟಿದೆ ಎಂಬ ಟೀಕೆಗೆ ಉತ್ತರ:**

ಅಮೆರಿಕನರು ಸಮತಾವಾದ ಎಂಬ ಪದಕ್ಕೆ ತಮ್ಮದೇ ಆದ ರೀತಿಯಲ್ಲಿ ವಿವರಣೆ ಕೊಡುತ್ತಾರೆ. ಆದರೆ ಇಂಡಿಯಾದಲ್ಲಿ ಜನರು ಬೇರೆ ರೀತಿಯಲ್ಲಿ ಆ ಪದಕ್ಕೆ ಅರ್ಥ ಕೊಡುತ್ತಾರೆ. ಇದರಿಂದ ಅನೇಕ ಅಮೆರಿಕನರು ಇಂಡಿಯಾದ ಜನರ ನಿಜ ಅಭಿಪ್ರಾಯವನ್ನು (ಸಮತಾವಾದದ ವಿಷಯವಾಗಿ) ತಿಳಿದುಕೊಳ್ಳಲು ಆಗಿಲ್ಲ. ಸಮಾಜದಲ್ಲಿ ಹಿಂದುಳಿದಿರುವ ಜನರ ಮಧ್ಯೆ ಇರುವ ಅನೇಕ ತೊಂದರೆಗಳನ್ನು ತೊಡೆದುಹಾಕಲು

---

[29] ಇಂಡಿಯಾ ಸಮಾಚಾರ; ವಾರಪತ್ರಿಕೆ; ಜೂನ್ 2, 1967 ಪು. 1–5.

ಇಂಡಿಯಾದಲ್ಲಿ ಅನೇಕ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿದೆ. ಅವನ್ನು ಕುರಿತು ಇಂಡಿಯಾದ ಜನರು ಸಮಾಜವಾದಿ ಅಥವ ಸಮತಾವಾದಿ ಕಾರ್ಯಗಳೆಂದು ಕರೆಯುತ್ತಾರೆ. ಇದುವರೆಗೆ ಅಭಿವೃದ್ಧಿ ಹೊಂದಿರುವ ದೇಶಗಳು ಹೇಗೆ ತಮ್ಮ ಅಭಿವೃದ್ಧಿಯನ್ನು ಸಾಧಿಸಿವೆ ಎಂಬುದನ್ನು ಇಂಡಿಯಾ ಸೂಕ್ಷ್ಮವಾಗಿ ಪರಿಶೀಲಿಸಿದೆ. ಆ ದೇಶಗಳಲ್ಲಿ ಆರ್ಥಿಕಾಭಿವೃದ್ಧಿ ಸಾಧಿಸಲು ಅನುಸರಿಸಿದ ಎಲ್ಲಾ ಮಾರ್ಗಗಳನ್ನು ಇಂಡಿಯಾ ಅನುಸರಿಸಲು ಇಷ್ಟಪಡುತ್ತಿಲ್ಲ. ತನ್ನ ಸಮಾಜಕ್ಕೆ ಮತ್ತು ಆರ್ಥಿಕ ವ್ಯವಸ್ಥೆಗೆ ಸರಿಹೊಂದುವಂತಹ ಕೆಲವು ಕಾರ್ಯಕ್ರಮಗಳನ್ನು ಮಾತ್ರ ಚುನಾಯಿಸಿಕೊಂಡು ಅವುಗಳನ್ನು ಇಂಡಿಯಾ ಅನುಷ್ಠಾನಕ್ಕೆ ತರುತ್ತಿದೆ. ಪಾಶ್ಚಿಮಾತ್ಯ ದೇಶಗಳಲ್ಲಿ ಅನುಸರಿಸುವಂತಹ ಉತ್ಪಾದನಾ ವಿಧಾನಗಳನ್ನು ಇಂಡಿಯಾ ಅನುಸರಿಸುತ್ತಿದೆ. ಏಕೆಂದರೆ, ಅಂತಹ ವಿಧಾನಗಳಿಂದ ತನಗೆ ಒಳ್ಳೆಯದಾಗುವುದೆಂದು ಇಂಡಿಯಾ ಭಾವಿಸಿದೆ. ಆದರೆ ಪಾಶ್ಚಿಮಾತ್ಯ ದೇಶಗಳಲ್ಲಿ ಬೆಳೆದುಕೊಂಡು ಬಂದಿರುವ ಸಮಾಜದ ನಡವಳಿಕೆಗಳನ್ನು ಅನುಸರಿಸಲು ಇಂಡಿಯಾ ಇಷ್ಟಪಡುತ್ತಿಲ್ಲ. ಆರ್ಥಿಕಾಭಿವೃದ್ಧಿ ಸಾಧಿಸುವುದಕ್ಕೋಸ್ಕರ ತನ್ನ ಜನರಿಗೆ ಅಧಿಕ ತೊಂದರೆಯನ್ನುಂಟುಮಾಡಲು ಇಂಡಿಯಾ ಸಿದ್ಧವಾಗಿಲ್ಲ. ಪಾಶ್ಚಿಮಾತ್ಯ ದೇಶಗಳಲ್ಲಿ ಆರ್ಥಿಕಾಭಿವೃದ್ಧಿಯಾಗುತ್ತಿದ್ದಾಗ ಅಲ್ಲಿಯ ಜನರು ಬಹಳ ತ್ಯಾಗ ಮಾಡಬೇಕಾಯಿತು. ಇಂಡಿಯಾದಲ್ಲಿ ಈಗಾಗಲೇ

ಜನರು ಸಾಕಷ್ಟು ಬಡತನದಿಂದ ನೊಂದಿದ್ದಾರೆ. ಆದು ದರಿಂದ ಜನರನ್ನು ಮತ್ತಷ್ಟು ತ್ಯಾಗ ಮಾಡಬೇಕೆಂದು ಕೇಳಿದರೆ ಇದರಿಂದ ತೊಂದರೆಗಳು ಉದ್ಭವಿಸಿ ಸಮಾಜ ದಲ್ಲಿ ಅಶಾಂತಿ ಉಂಟಾಗುತ್ತದೆ ಎಂಬುದನ್ನು ಇಂಡಿಯಾ ಅರಿತುಕೊಂಡಿದೆ. ಸಮಾಜದಲ್ಲಿ ಶಾಂತಿಯನ್ನು ಕಾಪಾಡಿಕೊಂಡು ಅದರೊಡನೆ ಹಿಂದುಳಿದ ವರ್ಗದ ಜನರಿಗೆ ನ್ಯಾಯವಾಗಿ ಸಲ್ಲಬೇಕಾದ ಸೌಕರ್ಯಗಳನ್ನು ಕಲ್ಪಿಸಿಕೊಡುವುದೇ ನಿಜವಾದ ಸಮಾಜವಾದ ಎಂದು ಇಂಡಿಯಾದ ಅಭಿಪ್ರಾಯ ಕೆಲವು ಪಾಶ್ಚಿಮಾತ್ಯ ದೇಶಗಳಲ್ಲಿ ನಡೆದಂತೆ ಕ್ರಾಂತಿಯ ಮೂಲಕ ಸಮಾಜವಾದವನ್ನು ಆಚರಣೆಗೆ ತರಲು ಇಂಡಿಯಾಕ್ಕೆ ಇಷ್ಟವಿಲ್ಲ.

ತನ್ನ ಗುರಿಯನ್ನು ಸಾಧಿಸಲು ಇಂಡಿಯಾ ಮಿಶ್ರ ಆರ್ಥಿಕ ನೀತಿಯನ್ನು ಅನುಸರಿಸಿಕೊಂಡು ಬರುತ್ತಿದೆ. ತನ್ನ ಆರ್ಥಿಕ ವ್ಯವಸ್ಥೆಯಲ್ಲಿನ ಕೆಲವು ಮುಖ್ಯ ಭಾಗ ಗಳನ್ನು ಸರ್ಕಾರದ ಹತೋಟಿಯಲ್ಲಿಟ್ಟುಕೊಂಡಿದೆ. ಇದರಿಂದ ದುರ್ಬಲವರ್ಗದ ಜನರಿಗೆ ಸಮಾಜದಲ್ಲಿ ನ್ಯಾಯ ದೊರಕಿಸಿಕೊಡಲು ಸಾಧ್ಯವಾಗುತ್ತದೆ ಎಂಬುದು ಇಂಡಿಯಾದ ನಂಬಿಕೆ. ಆದರೆ ಇಂಡಿಯಾ ಖಾಸಗೀ ವಲಯವನ್ನು ಪೋಷಿಸಿಕೊಂಡು ಬಂದಿದೆ. ಅಗತ್ಯ ಬಿದ್ದಾಗಲೆಲ್ಲಾ ಖಾಸಗೀ ವಲಯಕ್ಕೆ ಯಾವ ರೀತಿಯ ಉತ್ತೇಜನ ಬೇಕೋ ಅದೆಲ್ಲವನ್ನೂ ಒದಗಿಸಿದೆ. ಖಾಸಗೀ ವಲಯ ಮತ್ತು ಸರ್ಕಾರಿ ವಲಯಗಳ ಮಧ್ಯೆ ಹೊಂದಾ

ಣೆಕೆಯನ್ನು ಉಂಟುಮಾಡುವುದೇ ಇಂಡಿಯಾದ ಮುಖ್ಯ ಉದ್ದೇಶ. ಇದಕ್ಕೋಸ್ಕರ ಆರ್ಥಿಕ ಯೋಜನೆಯನ್ನು ಜಾರಿಗೆ ತರಲಾಗಿದೆ. 200 ವರ್ಷಗಳ ಬ್ರಿಟಿಷ್ ಆಡಳಿತದ ಪರಿಣಾಮವಾಗಿ ಅನೇಕ ಸಮಸ್ಯೆಗಳು ಇಂಡಿಯಾದಲ್ಲಿ ಉದ್ಭವಿಸಿವೆ. ಅವುಗಳನ್ನು ಒಂದೇ ಸಲಕ್ಕೆ ನಿವಾರಿಸಲು ಸಾಧ್ಯವಿಲ್ಲ. ಆದುದರಿಂದ ಹಂತ ಹಂತವಾಗಿ ಅವುಗಳನ್ನು ನಿವಾರಿಸಲು ಆರ್ಥಿಕ ಯೋಜನೆಯನ್ನು ರೂಪಿಸಲಾಗಿದೆ. ಆರ್ಥಿಕ ಯೋಜನೆಯನ್ನು ಜಾರಿಗೆ ತಂದಾಕ್ಷಣಕ್ಕೆ ಇಂಡಿಯಾಕ್ಕೆ ಖಾಸಗೀ ಉದ್ಯಮದ ವಿಷಯವಾಗಿ ಸಹಾನುಭೂತಿ ಇಲ್ಲ ಎನ್ನುವ ಹಾಗಿಲ್ಲ. ಖಾಸಗೀ ಉದ್ಯಮದ ವಿಷಯವಾಗಿ ಇಂಡಿಯಾದಲ್ಲಿ ಎಷ್ಟು ಉತ್ತೇಜನವಿದೆ ಎಂಬುದು ಮೂರು ಪಂಚವಾರ್ಷಿಕ ಯೋಜನೆಗಳಲ್ಲಿ ಸ್ಪಷ್ಟವಾಗಿ ಕಂಡು ಬಂದಿದೆ.

ಯಾವ ಆರ್ಥಿಕ ಚಟುವಟಿಕೆಗಳು ಖಾಸಗೀ ವಲಯದಲ್ಲಿರಬೇಕು ಅಥವ ಸರ್ಕಾರಿ ವಲಯುದಲ್ಲಿರಬೇಕು ಎಂದು ನಿರ್ಧರಿಸುವುದು ಕೇವಲ ಒಂದು ಸಾಮಾನ್ಯ ವಾದ. ಪ್ರತಿಯೊಂದು ದೇಶವೂ ಈ ವಿಷಯದಲ್ಲಿ ನಿರ್ಧಾರ ಕೈಗೊಳ್ಳುವಾಗ ತನ್ನ ದೇಶದಲ್ಲಿರುವ ಸನ್ನಿವೇಶಗಳನ್ನೂ ಮತ್ತು ತನ್ನ ಹಿತಾಸಕ್ತಿಗಳನ್ನೂ ಗಮನದಲ್ಲಿಟ್ಟುಕೊಂಡಿರುತ್ತದೆ. ಇಂಡಿಯಾದ ಅನೇಕ ಆರ್ಥಿಕ ಚಟುವಟಿಕೆಗಳು ಸರ್ಕಾರಿ ವಲಯದಲ್ಲಿವೆ. ಆದುದರಿಂದ ಅಮೆರಿಕನರು ಇಂಡಿಯಾವನ್ನು ಸಮತಾವಾದಿ ( ಸೋಷಿಯಲಿಸ್ಟ್ )

ದೇಶ ಎಂದು ಕರೆಯುತ್ತಾರೆ. ಮೇಲೆ ತಿಳಿಸಿರುವಂತೆ ಇಂಡಿಯಾ ತನ್ನ ಉದ್ದೇಶಗಳನ್ನು ಸಾಧಿಸಲು ಕೆಲವು ಆರ್ಥಿಕ ಕಾರ್ಯಕ್ರಮಗಳನ್ನು ಸರ್ಕಾರಿ ಹತೋಟಿಯಲ್ಲಿಯೇ ನಡೆಸುತ್ತದೆ. ಇದೇ ರೀತಿ ಅಮೆರಿಕಾದಲ್ಲೂ ಅನೇಕ ಆರ್ಥಿಕ ಕಾರ್ಯಕ್ರಮಗಳು ಸರ್ಕಾರದ ಹತೋಟಿಯಲ್ಲಿವೆ. ಆದರೆ ಅಮೆರಿಕನರು ತಮ್ಮ ಸಮಾಜವನ್ನು ಸಮತಾವಾದಿ ಸಮಾಜವೆಂದು ಕರೆಯುವುದಿಲ್ಲ. ಅಮೆರಿಕನರು ತಮ್ಮ ಆರ್ಥಿಕ ವ್ಯವಸ್ಥೆಯನ್ನು ನಿರ್ದೇಶಿತ ವ್ಯವಸ್ಥೆ (guided economy) ಎಂದು ಕರೆದುಕೊಳ್ಳುತ್ತಾರೆ. ಇಂತಹ ವ್ಯವಸ್ಥೆಯನ್ನೇ ಇಂಡಿಯಾದ ಜನರು ಸಮತಾವಾದಿ ಆರ್ಥಿಕ ವ್ಯವಸ್ಥೆ ಎಂದು ,ಕರೆದುಕೊಳ್ಳುತ್ತಾರೆ (socialist economy). ಆದುದರಿಂದ ಸಮತಾವಾದಿ ಆರ್ಥಿಕ ವ್ಯವಸ್ಥೆಯ ವ್ಯಾಖ್ಯಾನದಲ್ಲಿ ಮಾತ್ರ ಭಿನ್ನಾಭಿಪ್ರಾಯವಿದೆ.

ಅಮೆರಿಕಾದ ಆರ್ಥಿಕ ವ್ಯವಸ್ಥೆಯು ಇಂಡಿಯಾದ ಆರ್ಥಿಕ ವ್ಯವಸ್ಥೆಗಿಂತ ಅಧಿಕ ಪ್ರಮಾಣದಲ್ಲಿ ಸರ್ಕಾರದ ಹತೋಟಿಯಲ್ಲಿದೆ ಎಂಬುದನ್ನು ಪ್ರಾಧ್ಯಾಪಕ ಗಾಲ್‌ಬ್ರೈತ್‌ರವರು (ಹಾರ್‌ವರ್ಡ್ ವಿಶ್ವವಿದ್ಯಾನಿಲಯ) ತಮ್ಮ ಬರವಣಿಗೆಯಲ್ಲಿ ಸೂಚಿಸಿದ್ದಾರೆ. " ಇಂಡಿಯಾದ ಜನರು ತಮ್ಮ ಆವಶ್ಯಕತೆಗಳನ್ನು ಮತ್ತು ಆಶೆಗಳನ್ನು ನೆರವೇರಿಸಿಕೊಳ್ಳಲು ಅನೇಕ ಆರ್ಥಿಕ ಕಾರ್ಯಕ್ರಮಗಳನ್ನು ಸರ್ಕಾರದ ಹತೋಟಿಯಲ್ಲಿ ನಡೆಸಿಕೊಂಡು ಹೋಗುತ್ತಿದ್ದಾರೆ. ಆದಾಗ್ಯೂ, ನಾವು ಇಂಡಿಯಾದ

ಆರ್ಥಿಕ ಚಟುವಟಿಕೆಗಳನ್ನು ಎಂತಹ ಪರೀಕ್ಷೆಗೆ ಒಳ ಪಡಿಸಿದರೂ ಅವು ಸರ್ಕಾರದ ಹತೋಟಿಗೆ ಬಹಳಮಟ್ಟಿಗೆ ಹೊಂದಿಕೊಂಡಿಲ್ಲವೆಂದು ಹೇಳಬಹುದು. ಪ್ರಪಂಚದ ಅನೇಕ ದೇಶಗಳೊಂದಿಗೆ ಹೋಲಿಸಿ ನೋಡಿವರೆ ಇಂಡಿಯಾದ ಆರ್ಥಿಕ ವ್ಯವಸ್ಥೆಯು ಅತಿ ಕಡಿಮೆ ಪ್ರಮಾಣದಲ್ಲಿ ಸರ್ಕಾರದ ಹತೋಟಿಗೆ ಒಳಪಟ್ಟಿವೆ ಎಂದು ಹೇಳಬಹುದು. ಅಮೆರಿಕಾದ ಒಟ್ಟು ಉತ್ಪಾದನೆಯಲ್ಲಿ ಶೇಕಡಾ 20 ರಷ್ಟನ್ನು ವಿವಿಧ ಸರ್ಕಾರಿ ಇಲಾಖೆಗಳು ವಿಲೆ ಮಾಡುತ್ತವೆ. ಆದರೆ ಇಂಡಿಯಾದಲ್ಲಿ ಶೇಕಡಾ 10 ರಷ್ಟನ್ನು ಮಾತ್ರ ಸರ್ಕಾರಿ ಇಲಾಖೆಗಳು ವಿಲೆ ಮಾಡುತ್ತವೆ. ಇದೇ ರೀತಿ ಅಮೆರಿಕಾ ದೇಶದ ಒಟ್ಟು ಚಟುವಟಿಕೆಗಳನ್ನು ಪರೀಕ್ಷಿಸಿದರೆ ಅರ್ಧಕ್ಕಿಂತ ಹೆಚ್ಚು ಚಟುವಟಿಕೆಗಳು ಸರ್ಕಾರದಿಂದ ನಿರ್ವಹಿಸಲ್ಪಡುತ್ತವೆ ಎಂದು ಹೇಳಬಹುದು.[30]

ಪ್ರತಿಯೊಂದು ದೇಶದ ಆರ್ಥಿಕ ಜೀವನದಲ್ಲೂ ಸರ್ಕಾರಿ ಕ್ಷೇತ್ರದ ಪ್ರಭಾವ ಇದ್ದೇ ಇರುತ್ತದೆ ಎಂಬುದು ಮೇಲ್ಕಂಡ ನಿರೂಪಣೆಯಿಂದ ತಿಳಿದುಬರುತ್ತದೆ. ಜೊತೆಗೆ ಪ್ರತಿ ದೇಶವೂ ತನ್ನ ಸಂದರ್ಭಕ್ಕನುಸಾರವಾಗಿ ಆರ್ಥಿಕ ನೀತಿಯನ್ನು ರೂಪಿಸಿಕೊಳ್ಳುತ್ತದೆ. ನಾವು

---

[30] ಜೆ. ಕೆ. ಗಾಲ್‌ಬ್ರೈತ್: “ ಪ್ರತಿಸ್ಪರ್ಧಿ ಆರ್ಥಿಕ ನಿಯಮಗಳು ಮತ್ತು ಇಂಡಿಯಾ ” – ವಿದೇಶಿ ವ್ಯವಹಾರಗಳು (ತ್ರೈಮಾಸಿಕ ಪತ್ರಿಕೆ) ಜುಲೈ 1958; ಪು. 589.

ಹಿಂದಿನ ಅಧ್ಯಾಯಗಳಲ್ಲಿ ಆರ್ಥಿಕ ಸಹಾಯದ ಉದ್ದೇಶಗಳನ್ನು ವಿವರಿಸಿದಾಗ, ಇಂಡಿಯಾದ ಆರ್ಥಿಕ ನೀತಿಯನ್ನು ಅಮೆರಿಕಾ ಇಚ್ಛೆಯಂತೆ ರೂಪಿಸಿಕೊಳ್ಳಬೇಕೆಂದು ಅಮೆರಿಕಾದ ನೀತಿಯಲ್ಲವೆಂಬುವನ್ನು ಸ್ಪಷ್ಟಪಡಿಸಿದ್ದೇವೆ. ಆದುದರಿಂದ ಸೋಷಿಯಲಿಸ್ಟ್ ಪದ್ಧತಿಯ ಆರ್ಥಿಕ ಯೋಜನೆಯನ್ನು ಕೈಗೊಳ್ಳಲು ಇಂಡಿಯಾಕ್ಕೆ ಪ್ರೋತ್ಸಾಹ ನೀಡುವುದರ ಮೂಲಕ ಅಮೆರಿಕಾ ತಪ್ಪು ಮಾಡಿದೆ ಎಂಬ ಟೀಕೆಯಲ್ಲಿ ಸತ್ಯಾಂಶವಿಲ್ಲವೆಂದು ಹೇಳಬಹುದು. ಅದಲ್ಲದೆ ಸೋಷಿಯಲಿಸ್ಟ್ ಪದ್ಧತಿಯನ್ನು ಅನುಸರಿಸುತ್ತಿರುವುದರಿಂದ ಇಂಡಿಯಾದ ಪರಿಸ್ಥಿತಿ ಹದಗೆಟ್ಟಿದೆ ಎಂಬುದರಲ್ಲಿಯೂ ಹುರುಳಿಲ್ಲ

**ಜನಸಂಖ್ಯೆಯ ನಿಯಂತ್ರಣಕ್ಕೆ ಗಮನ ಕೊಟ್ಟಿಲ್ಲವೆಂಬ ಆರೋಪಣೆಗೆ ಉತ್ತರ:**

ಜನಸಂಖ್ಯೆಯ ನಿಯಂತ್ರಣ ಕಾರ್ಯವನ್ನು ಇಂಡಿಯಾ ನಿರ್ಲಕ್ಷಿಸಿಲ್ಲ. 1956 ರಿಂದ ಜನಸಂಖ್ಯೆಯ ಮೇಲೆ ಹತೋಟಿ ಇಟ್ಟುಕೊಳ್ಳಲು ವಿಶೇಷ ಪ್ರಯತ್ನಗಳನ್ನು ಮಾಡಿದೆ. ಆದರೆ ಅವರಿಂದ ದೊರೆಯುತ್ತಿರುವ ಫಲಿತಾಂಶ ನಿಧಾನವಾಗಿ ಕಂಡುಬರುತ್ತಿದೆ.

ಕುಟುಂಬ ಯೋಜನೆಯ ಕಾರ್ಯಕ್ರಮಗಳಿಗೆ ಇಂಡಿಯಾ ಕೊಡುತ್ತಿರುವ ಪ್ರಾಶಸ್ತ್ಯವನ್ನು ಗಮನಿಸಿದರೆ ಪ್ರಪಂಚದ ಮತ್ತಾವ ದೇಶದಲ್ಲೂ ಇಂತಹ ಅದ್ಭುತ ಕಾರ್ಯವನ್ನು ಕೈಗೊಂಡಿಲ್ಲವೆಂದು ಹೇಳಬಹುದು.

1966 ರಿಂದ ಈಚೆಗಂತೂ ಕುಟುಂಬ ಯೋಜನೆಯ ಚಟುವಟಿಕೆಗಳು ಬೃಹದಾಕಾರದಲ್ಲಿ ಬೆಳೆದಿವೆ. ಇಂಡಿಯಾ ಸರ್ಕಾರ ಕುಟುಂಬ ಯೋಜನೆಯ ವಿಷಯದಲ್ಲಿ ಈ ಕೆಳಗೆ ಕಂಡ ಮುಖ್ಯ ಉದ್ದೇಶಗಳನ್ನು ಇರಿಸಿಕೊಂಡಿದೆ: (1) ಈಗ 1000 ಪ್ರಜಾ ಸಂಖ್ಯೆಗೆ 40 ಮಕ್ಕಳ ಜನನ ಪ್ರಮಾಣ ಇದೆ. ಅದನ್ನು 1971 ರವೇಳೆಗೆ 1000 ಕ್ಕೆ 37 ರಂತೆಯೂ, 1976 ರ ವೇಳೆಗೆ 1000 ಕ್ಕೆ 25 ರಂತೆಯೂ ಇಳಿಸುವ ಉದ್ದೇಶ ಇರಿಸಿಕೊಂಡಿದೆ. (2) ವಿವಿಧ ರೀತಿಯ ಜನನ ನಿಯಂತ್ರಣ ಕ್ರಮಗಳನ್ನು ಜನರಿಗೆ ತೋರಿಸಿಕೊಟ್ಟು ಎಲ್ಲಾ ವರ್ಗದ ಜನರು ಅವುಗಳನ್ನು ಅನುಸರಿಸುವಂತೆ ಮಾಡುವುದು. (3) ಜನರು ಸ್ವಯಂ ಪ್ರೇರಣೆಯಿಂದ ಕುಟುಂಬ ಯೋಜನೆಯನ್ನು ಅನುಸರಿಸುವಂತೆ ಮಾಡುವುದು.

ಕುಟುಂಬ ಯೋಜನೆಯನ್ನು ಕಾರ್ಯಗತಗೊಳಿಸಲು ಇಂಡಿಯಾ ಸರ್ಕಾರ (1) ಒಂದು ಪ್ರತ್ಯೇಕ ಇಲಾಖೆಯನ್ನೇ ಸ್ಥಾಪಿಸಿದೆ. (2) ಇದಕ್ಕಾಗಿ ವೆಚ್ಚ ಮಾಡುವ ಹಣದ ಮೊಬಲಗನ್ನು ಬಹಳಮಟ್ಟಿಗೆ ಹೆಚ್ಚಿಸಲಾಗಿದೆ. ಮೊದಲನೆ ಪಂಚವಾರ್ಷಿಕ ಯೋಜನೆಯಲ್ಲಿ ಇದಕ್ಕಾಗಿ 7 ದಶಲಕ್ಷ ರೂಪಾಯಿಗಳನ್ನು ನಿಗದಿ ಮಾಡಲಾಗಿತ್ತು. ಎರಡನೆ ಪಂಚವಾರ್ಷಿಕ ಯೋಜನೆಯಲ್ಲಿ 49·7 ದಶಲಕ್ಷ ರೂಪಾಯಿಗಳನ್ನು ಮತ್ತು ಮೂರನೆಯ ಯೋಜನೆಯಲ್ಲಿ 270 ದಶಲಕ್ಷ ರೂಪಾಯಿಗಳನ್ನು ನಿಗದಿ

ಮಾಡಲಾಗಿತ್ತು. ನಾಲ್ಕನೆ ಯೋಜನೆಯಲ್ಲಿ 5000 ದಶಲಕ್ಷ ರೂಪಾಯಿಗಳವರೆಗೂ ವೆಚ್ಚ ಮಾಡಲು ಯೋಚಿಸಲಾಗಿದೆ. (3) ವಿವಿಧ ರೀತಿಯ ಕ್ರಮ ಗಳನ್ನು ಜನರು ಅನುಸರಿಸಲು ಸಹಾಯ ಮಾಡಲಾಗು ತ್ತಿದೆ. ಕಳೆದ 12 ವರ್ಷಗಳಲ್ಲಿ (1956–1968) 4·5 ದಶಲಕ್ಷ ಜನನ ನಿಯಂತ್ರಣ ಶಸ್ತ್ರ ಚಿಕಿತ್ಸೆಗಳನ್ನೂ ಮತ್ತು 2·4 ದಶಲಕ್ಷ ವಂಕಿಧಾರಣೆಗಳನ್ನೂ ನಡೆಸ ಲಾಯಿತು. ಈ ಪೈಕಿ 2·7 ದಶಲಕ್ಷ ಶಸ್ತ್ರ ಚಿಕಿತ್ಸೆ ಗಳನ್ನೂ ಮತ್ತು 1·5 ದಶಲಕ್ಷ ವಂಕಿಧಾರಣೆಗಳನ್ನೂ ಕಳೆದ 2 ವರ್ಷಗಳಲ್ಲಿ (1966–68) ನೆರವೇರಿಸ ಲಾಯಿತು. (4) ಬಹಳ ಕಡಿಮೆ ಬೆಲೆಯಲ್ಲಿ " ನಿರೋಧ್ "ಗಳನ್ನು ಒದಗಿಸಿ ಜನರು ಅವುಗಳನ್ನು ಉಪಯೋಗಿಸುವಂತೆ ಪ್ರೋತ್ಸಾಹಿಸಲಾಗುತ್ತಿದೆ.

ಕುಟುಂಬ ಯೋಜನೆಯ ಪರಿಣಾಮಗಳನ್ನು ತಿಳಿದುಕೊಳ್ಳಲು ಕೇಂದ್ರ ಕುಟುಂಬ ಯೋಜನೆ ಸಂಸ್ಥೆಯು ಒಂದು ಸಮೀಕ್ಷೆಯನ್ನು ನಡೆಸಿತು. ಅದರ ಪ್ರಕಾರ ಒಂದು ಜನನ ನಿಯಂತ್ರಣ ಶಸ್ತ್ರ ಚಿಕಿತ್ಸೆಯು 1·5 ಜನನವನ್ನು ತಡೆಗಟ್ಟುವುದೆಂದೂ ಮತ್ತು ಒಂದು ವಂಕಿಧಾರಣೆಯು 0.5 ಜನನವನ್ನು ತಡೆಗಟ್ಟುವುದೆಂದು ತಿಳಿದು ಬಂದಿದೆ. ಒಂದು ವರ್ಷಕಾಲ " ನಿರೋಧ್ " ಅನ್ನು ಬಳಸಿದರೆ 0.125 ಜನನವನ್ನು ತಡೆಗಟ್ಟು ವುದು ಎಂದು ಕಂಡುಬಂದಿದೆ.

ಮೇಲ್ಕಂಡ ಅಂದಾಜಿನ ಪ್ರಕಾರ ಲೆಖ್ಖ ಹಾಕಿದರೆ

ಇದುವರೆಗೆ 70 ಲಕ್ಷ ಜನನವನ್ನು ದೇಶದಲ್ಲಿ ತಡೆಹಿಡಿಯ ಲಾಯಿತೆಂದು ತಿಳಿದುಬಂದಿದೆ. ಇದೇ ರೀತಿ ಜನರು ವಿವಿಧ ಕ್ರಮಗಳನ್ನು ಅನುಸರಿಸಿಕೊಂಡು ಹೋದರೆ 12.5 ದಶಲಕ್ಷ ಜನನಗಳನ್ನು 1976–77 ರ ವೇಳೆಗೆ ತಡೆಹಿಡಿಯಬಹುದು ಎಂದು ಅಂದಾಜು ಮಾಡಲಾಗಿದೆ.[31]

ಮೇಲ್ಕಂಡ ಅಂಕಿ ಅಂಶಗಳು ಎಷ್ಟರಮಟ್ಟಿಗೆ ಕುಟುಂಬ ಯೋಜನೆಯನ್ನು ಜಾರಿಗೆ ತರಲಾಗಿದೆ ಎಂಬು ದನ್ನು ತೋರಿಸುತ್ತವೆ. ಸಾಕಷ್ಟು ಪ್ರಗತಿ ಸಾಧಿ ಸಿದ್ದರೂ, ಕುಟುಂಬ ಯೋಜನೆಯ ಫಲಿತಾಂಶ ಬಹಳ ನಿಧಾನವಾಗಿ ಜನರಿಗೆ ಕಂಡುಬರುತ್ತದೆ. ಇದು ಒಂದು ದೊಡ್ಡ ಸಮಸ್ಯೆ. ಜನರಲ್ಲಿ ಸಾವಿರಾರು ವರ್ಷಗಳಿಂದ ಬೇರೂರಿರುವ ಮನೋಭಾವನೆಗಳನ್ನು ಅಲ್ಪಕಾಲಾ ವಧಿಯಲ್ಲಿ ತೊಡೆದುಹಾಕಲು ಸಾಧ್ಯವಿಲ್ಲ. ಎಲ್ಲಾ ಹಿಂದುಳಿದ ದೇಶಗಳಲ್ಲಿರುವ ಈ ಸಮಸ್ಯೆಯನ್ನು ಪರಿಶೀಲಿ ಸಿದರೆ, ಅತಿ ಶೀಘ್ರದಲ್ಲಿ ಜನನ ಪ್ರಮಾಣವನ್ನು ಕಡಿಮೆ ಮಾಡಲು ಸಾಧ್ಯವಾಗಿಲ್ಲವೆಂಬುದು ತಿಳಿದುಬರುತ್ತದೆ. ಆದಾಗ್ಯೂ ಇಂಡಿಯಾ ಸರ್ಕಾರ ವಿಪುಲ ಜನಸಂಖ್ಯೆಯ ಪರಿಣಾಮಗಳೇನು ಎಂಬುದನ್ನು ಗ್ರಹಿಸಿಕೊಂಡು ಅದನ್ನು ಪರಿಣಾಮಕಾರಿಯಾಗಿ ನಿಯಂತ್ರಿಸಲು ಶಪಥ ಮಾಡಿದೆ. ಆದುದರಿಂದ ಕೆಲವು ಅಮೆರಿಕನ್ನರು ಇಂಡಿಯಾದ ಜನನ

---

[31] ಯೋಜನಾ ನಿಯತಕಾಲಿಕೆ; ಸೆಪ್ಟೆಂಬರ್ 15, 1968 ಪು. 4.

ನಿಯಂತ್ರಣ ಕಾರ್ಯಕ್ರಮಗಳನ್ನು ತಿಳಿದುಕೊಳ್ಳದೆ ವೃಥಾ ಟೀಕೆ ಮಾಡಿದ್ದಾರೆ.

**ಇಂಡಿಯಾ ಅಮೆರಿಕಾದ ನೀತಿಗಳನ್ನು ಸಮರ್ಥಿಸದೆ ಟೀಕಿಸು ತ್ತದೆ ಎಂಬ ಆರೋಪಣೆಗೆ ಉತ್ತರ:**

ಅನೇಕ ಸಂದರ್ಭಗಳಲ್ಲಿ ರಾಜಕೀಯ ವಿಷಯಗಳಲ್ಲಿ ಮತ್ತು ಅಂತರರಾಷ್ಟ್ರೀಯ ವಿಷಯಗಳಲ್ಲಿ ಇಂಡಿಯಾ ಸರ್ಕಾರ ಅಮೆರಿಕಾ ಸರ್ಕಾರದ ಧೋರಣೆಯನ್ನು ಒಪ್ಪು ತ್ತಿಲ್ಲನೆಂಬುದು ನಿಜ. ವಿಯಟ್ನಾಂ ಯುದ್ಧದ ವಿಷಯ ದಲ್ಲಿ ಅನೇಕ ಸಲ ಇಂಡಿಯಾ ಅಮೆರಿಕಾವನ್ನು ಟೀಕಿಸಿದೆ. ಇದೇ ರೀತಿ ಅರಬ್ ಮತ್ತು ಇಸ್ರೇಲಿ ರಾಷ್ಟ್ರಗಳ ವಿಷಯ ದಲ್ಲಿ ಅಮೆರಿಕಾದ ಧೋರಣೆಯನ್ನು ಖಂಡಿಸಿದೆ. ಜೆಕೋಸ್ಲೋವಾಕಿಯಾದ ಮೇಲೆ ರಷ್ಯಾ ಆಕ್ರಮಣ ನೀತಿ ಅನುಸರಿಸಿದಾಗ ಅಮೆರಿಕಾ ರಷ್ಯಾವನ್ನು ಟೀಕಿ ಸಿತು. ಆದರೆ ಇಂಡಿಯಾ ರಷ್ಯಾವನ್ನು ಖಂಡಿಸಲಿಲ್ಲ. ಹೀಗೆ ಅನೇಕ ಸಂದರ್ಭಗಳಲ್ಲಿ ಇಂಡಿಯಾ ಮತ್ತು ಅಮೆರಿಕಾಗಳ ಮಧ್ಯೆ ಭಿನ್ನಾಭಿಪ್ರಾಯಗಳಿವೆ. ಆದುದ ರಿಂದ ಅನೇಕ ಅಮೆರಿಕನ್ ನಾಯಕರುಗಳು ಇಂಡಿಯಾ ಕ್ಕೆ ಕೊಡುತ್ತಿರುವ ಆರ್ಥಿಕ ಸಹಾಯವನ್ನು ನಿಲ್ಲಿಸ ಬೇಕೆಂದು ವಾದಿಸಿದ್ದಾರೆ.

ಹಿಂದಿನ ಅಧ್ಯಾಯಗಳಲ್ಲಿ ಆರ್ಥಿಕ ಸಹಾಯದ ಉದ್ದೇಶಗಳನ್ನು ಕುರಿತು ಚರ್ಚಿಸಿದ್ದೇವೆ. ಅವರ ಪ್ರಕಾರ ಇಂಡಿಯಾ ಸರ್ಕಾರ ಎಲ್ಲಾ ವಿಷಯಗಳಲ್ಲೂ

ಅಮೆರಿಕಾ ಹಾದಿಯನ್ನು ಅನುಸರಿಸಬೇಕೆಂದು ಒತ್ತಾಯ ಪಡಿಸಿಲ್ಲ. ಅಮೆರಿಕಾ ಆರ್ಥಿಕ ಸಹಾಯವನ್ನು ಒದಗಿಸಿರುವುದು ಇಂಡಿಯಾ ಆರ್ಥಿಕವಾಗಿ ಅಭಿವೃದ್ಧಿ ಹೊಂದಲೆಂದು. ಆರ್ಥಿಕ ಸಹಾಯದ ನೆಪದಲ್ಲಿ ತನ್ನ ರಾಜಕೀಯ ನಿಲುವನ್ನು ಇಂಡಿಯಾದ ಮೇಲೆ ಹೇರುವುದಿಲ್ಲವೆಂದು ಅಮೆರಿಕಾ ಭರವಸೆ ಕೊಟ್ಟಿದೆ. ಆದುದರಿಂದ ಅನೇಕ ಅಮೆರಿಕನರು ಮಾಡಿರುವ ಟೀಕೆಗಳು ಸರಿಯಲ್ಲ ಎಂದು ಕಂಡುಬರುತ್ತದೆ.

ಮೇಲ್ಕಂಡ ಟೀಕೆಗಳನ್ನು ಆರ್ಥಿಕ ನೆರವಿನ ಉದ್ದೇಶಗಳ ಹಿನ್ನೆಲೆಯಲ್ಲಿ ಪರಿಶೀಲಿಸಿದರೆ, ಎಲ್ಲಾ ಟೀಕೆಗಳು ತಪ್ಪು ಭಾವನೆಯಿಂದ ಉದ್ಭವಿಸಿವೆ ಎಂದು ಹೇಳಬಹುದು. ಮುಖ್ಯವಾಗಿ ಇಂಡಿಯಾದೇಶ ಆರ್ಥಿಕ ನೆರವನ್ನು ಪಡೆಯುತ್ತಿರುವುದು ದೇಶದ ಅಭಿವೃದ್ಧಿಯನ್ನು ಸಾಧಿಸುವುದಕ್ಕಾಗಿ. ಇದೇ ರೀತಿ ಅಮೆರಿಕಾ ಆರ್ಥಿಕ ನೆರವನ್ನು ಕೊಡುತ್ತಿರುವುದರ ಮುಖ್ಯ ಉದ್ದೇಶ ಇಂಡಿಯಾದ ಆರ್ಥಿಕ ಅಭಿವೃದ್ಧಿಯಾಗಲೆಂದು. ಇದುವರೆಗೆ ಇಂಡಿಯಾ ಸಾಧಿಸಿರುವ ಪ್ರಗತಿಯನ್ನು ನೋಡಿದರೆ ಮುಖ್ಯ ಉದ್ದೇಶ ನೆರವೇರಿಸಲ್ಪಟ್ಟಿದೆ ಎಂಬುದು ಕಂಡುಬರುತ್ತದೆ. ವ್ಯವಸಾಯದಲ್ಲಿ ಸಾಕಷ್ಟು ಪ್ರಗತಿಯಾಗಿದೆ. ಕುಟುಂಬ ಯೋಜನೆಯು ಜನಪ್ರಿಯವಾಗುತ್ತಿದೆ. ಅನೇಕ ನೂತನ ಕೈಗಾರಿಕೆಗಳು ಅಭಿವೃದ್ಧಿಯಾಗುತ್ತಿವೆ. ಆದರೆ ಅಮೆರಿಕದ ನಿರೀಕ್ಷಣೆಗೆ ತಕ್ಕ ಹಾಗೆ ಇಂಡಿಯಾ ಪ್ರಗತಿ ಸಾಧಿಸದೆ ಇರಬಹುದು.

ಇದಕ್ಕೋಸ್ಕರ ಇಂಡಿಯಾವನ್ನು ಟೀಕಿಸುವುದು ಸಾಧು ವಲ್ಲವೆಂದು ಹೇಳಬಹುದು. ನೂರಾರು ಸಮಸ್ಯೆಗಳನ್ನು ಎದುರಿಸಬೇಕಾಗಿರುವುದರಿಂದ ಅಮೆರಿಕಾದಂತೆ ವೇಗ ವಾಗಿ ಆರ್ಥಿಕ ಪ್ರಗತಿಯನ್ನು ಸಾಧಿಸಲು ಇಂಡಿಯಾಕ್ಕೆ ಸಾಧ್ಯವಿಲ್ಲವೆಂಬುದನ್ನು ಅಮೆರಿಕನ್ ವಿಮರ್ಶಕರು ತಿಳಿದುಕೊಳ್ಳುವುದು ಎರಡೂ ದೇಶಗಳ ಹಿತದೃಷ್ಟಿಯಿಂದ ಒಳ್ಳೆಯದು.

# ೯. ಪರಿಸಮಾಪ್ತಿ

ಇಂಡಿಯಾದ ಪಂಚವಾರ್ಷಿಕ ಯೋಜನೆಗಳ ಜೊತೆಗೆ ಅಮೆರಿಕಾ ಆರ್ಥಿಕ ಸಹಾಯದ ಯೋಜನೆಯೂ ಉದ್ಭವಿಸಿತು. ಕಳೆದ 19 ವರ್ಷಗಳಲ್ಲಿ (1951–1970) ಇಂಡಿಯಾ ಮತ್ತು ಅಮೆರಿಕಾ ದೇಶಗಳ ಮಧ್ಯೆ ಒಳ್ಳೆ ಸಹಕಾರ ಬೆಳೆದುಬಂದಿದೆ. ಆರ್ಥಿಕ ಅಭಿವೃದ್ಧಿಯನ್ನು ಸಾಧಿಸಲು ಇಂಡಿಯಾ ಸತತ ಹೋರಾಟ ನಡೆಸುತ್ತಿದೆ. ಈ ಹೋರಾಟದಲ್ಲಿ ಇಂಡಿಯಾ ಜಯಪ್ರದವಾಗಲು ಅಮೆರಿಕಾ ತನ್ನ ಸ್ನೇಹಹಸ್ತವನ್ನು ಇತ್ತಿದೆ. ಹಿಂದುಳಿದ ದೇಶಗಳು ಪ್ರಜಾಪ್ರಭುತ್ವದ ಚೌಕಟ್ಟಿನಲ್ಲಿ ಆರ್ಥಿಕಾಭಿವೃದ್ಧಿಯನ್ನು ಸಾಧಿಸಬಹುದು ಎಂಬುದನ್ನು ಇಂಡಿಯಾ ಎತ್ತಿಹಿಡಿದಿದೆ. ಈ ಘನ ಉದ್ದೇಶವನ್ನು ಅಮೆರಿಕಾ ಬಹಳವಾಗಿ ಮೆಚ್ಚಿಕೊಂಡು ಇಂಡಿಯಾವನ್ನು ಪ್ರೋತ್ಸಾಹಿಸುತ್ತದೆ.

ಕಳೆದ ಅಧ್ಯಾಯಗಳಲ್ಲಿ ನಾವು ಅಮೆರಿಕಾದ ಆರ್ಥಿಕ ನೆರವು ಮತ್ತು ಅದರ ಪರಿಣಾಮಗಳನ್ನು ಕುರಿತು ವಿಮರ್ಶಿಸಿದ್ದೇವೆ. ಆದುದರಿಂದ ಅಮೆರಿಕಾದ ಎರಡು ಉದ್ದೇಶಗಳು ನೆರವೇರಿಸಲ್ಪಟ್ಟಿವೆ ಎಂದು ಹೇಳಬಹುದು. (1) ಇಂಡಿಯಾವು ಆರ್ಥಿಕಾಭಿವೃದ್ಧಿಯನ್ನು ಸಾಧಿಸಬೇಕು ಮತ್ತು (2) ಇಂಡಿಯಾದಲ್ಲಿ ಪ್ರಜಾಪ್ರಭುತ್ವ ಯಶಸ್ವಿಯಾಗಿ ಉಳಿದುಕೊಂಡು ಹೋಗಬೇಕು ಎಂಬುದು ಅಮೆರಿಕಾದ ಉದ್ದೇಶವಾಗಿದೆ. ಇದುವರೆಗಿನ ಸ್ಥಿತಿಗತಿ

ಗಳನ್ನು ಪರಿಶೀಲಿಸಿದರೆ ಇಂಡಿಯಾ ಅಮೆರಿಕಾಕ್ಕೆ ಆಶಾ ಭಂಗವನ್ನುಂಟುಮಾಡಿಲ್ಲವೆಂದು ಹೇಳಬಹುದು.

ಇಂಡಿಯಾ ಅನೇಕ ರೀತಿಯ ಹತೋಟಿಗಳನ್ನು ತನ್ನ ಆರ್ಥಿಕ ವ್ಯವಸ್ಥೆಯಲ್ಲಿ ಉಳಿಸಿಕೊಂಡಿರುವುದು ತನ್ನ ಹಿತ ದೃಷ್ಟಿಯಿಂದ ಮಾತ್ರ. ಆದಾಗ್ಯೂ ಇಂಡಿಯಾ ಸರ್ಕಾರ ಆರ್ಥಿಕ ಧೋರಣೆಗಳನ್ನು ಜಾರಿಗೆ ತರುವಾಗ ನಿರಂಕುಶ ರೀತಿಯಲ್ಲಿ ವರ್ತಿಸುವ ಹಾಗಿಲ್ಲ. ಇಂಡಿಯಾ ಸರ್ಕಾರ ತನ್ನ ಎಲ್ಲಾ ಆರ್ಥಿಕ ಧೋರಣೆಗಳನ್ನು ರಾಜ್ಯಾಂಗದ ಮಿತಿಯೊಳಗೆ ನಡೆಸಿಕೊಂಡು ಹೋಗಬೇಕು. ರಾಜ್ಯಾಂಗವು ಇಂಡಿಯಾದ ಪ್ರಜೆಗಳಿಗೆ ಆರ್ಥಿಕ ಸ್ವಾತಂತ್ರ್ಯವನ್ನೂ ಮತ್ತು ರಾಜಕೀಯ ಸ್ವಾತಂತ್ರ್ಯವನ್ನೂ ಒದಗಿಸಿ ಕೊಟ್ಟಿದೆ. ನಾಗರಿಕರ ಹಕ್ಕುಬಾಧ್ಯತೆಗಳನ್ನು ಎತ್ತಿ ಹಿಡಿದಿದೆ. ಯಾವ ಸಂದರ್ಭದಲ್ಲೇ ಆಗಲಿ ನಾಗರಿಕರ ಹಕ್ಕುಗಳನ್ನು ಸರ್ಕಾರ ಕಡೆಗಣಿಸಿದರೆ ನ್ಯಾಯಾಂಗವು ಪ್ರಜೆಗಳ ರಕ್ಷಣೆಗೆ ಬರುತ್ತದೆ. ಈ ರೀತಿ ಇಂಡಿಯಾದ ಪ್ರಜಾಪ್ರಭುತ್ವ ಪದ್ಧತಿಯು ಅನೇಕ ವಿಷಯಗಳಲ್ಲಿ ಅಮೆರಿಕನ್ ಪ್ರಜಾಪ್ರಭುತ್ವ ಪದ್ಧತಿಯನ್ನು ಹೋಲುತ್ತದೆ. ಆದುದರಿಂದ ಅಮೆರಿಕನ್ ಸರ್ಕಾರ ಇಂಡಿಯಾದ ಪ್ರಜಾಪ್ರಭುತ್ವ ಪದ್ಧತಿಯನ್ನು ನೋಡಿ ಬಹಳ ನಾಗಿ ಮೆಚ್ಚಿಕೊಂಡಿದೆ. ಇದು ಎರಡು ರಾಷ್ಟ್ರಗಳ ಸರ್ಕಾರಗಳ ಮಧ್ಯೆ ಒಳ್ಳೆಯ ಬಾಂಧವ್ಯಕ್ಕೆ ಎಡೆ ಮಾಡಿ ಕೊಟ್ಟಿದೆ.

ಎರಡು ದೇಶಗಳಲ್ಲಿಯೂ ಕೆಲವು ಜನರು ಅಮೆರಿಕಾದ

ಆರ್ಥಿಕ ಸಹಾಯವನ್ನು ಖಂಡಿಸುತ್ತಲೇ ಇದ್ದಾರೆ. **ಆದರೆ ಆರ್ಥಿಕ ಸಹಾಯದ ಒಳ್ಳೆಯ ಪರಿಣಾಮವನ್ನು ಕಾಣಬೇಕಾದರೆ ಕಾಲಾವಧಿ ಅತ್ಯವಶ್ಯಕ.** ಪಾಶ್ಚಿಮಾತ್ಯ ದೇಶಗಳು ತಮ್ಮ ದೇಶಗಳನ್ನು ಆರ್ಥಿಕವಾಗಿ ಅಭಿವೃದ್ಧಿಗೊಳಿಸಬೇಕಾದರೆ ಸುಮಾರು 150 ವರ್ಷಗಳನ್ನು ತೆಗೆದುಕೊಂಡವು. ಆದರೆ ಇಂಡಿಯಾ ಅಷ್ಟೇ ಅಭಿವೃದ್ಧಿಯನ್ನು ಕೆಲವೇ ವರ್ಷಗಳಲ್ಲಿ ಸಾಧಿಸಲು ಯತ್ನಿಸುತ್ತಿದೆ. ಅದರ ಪರಿಣಾಮವಾಗಿ ಇಂಡಿಯಾದ ಪರಿಶ್ರಮಗಳಲ್ಲಿ ಕೆಲವು ಲೋಪದೋಷಗಳನ್ನು ಕಾಣುವುದು ಸಹಜ. ಇಂಡಿಯಾ ಸಾಧಿಸಿರುವ ಪ್ರಗತಿ ವಿಷಯದಲ್ಲಿ ಎಷ್ಟೇ ಭಿನ್ನಾಭಿಪ್ರಾಯವಿದ್ದರೂ, ಅಮೆರಿಕಾದ ಆರ್ಥಿಕ ನೆರವು ಇಂಡಿಯಾದ ಅಭಿವೃದ್ಧಿಗೆ ಸಾಕಷ್ಟು ಕೊಡುಗೆಯನ್ನಿತ್ತಿದೆ ಎಂದು ನಿಸ್ಸಂದೇಹವಾಗಿ ಹೇಳಬಹುದು.

